KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜುಲೈ ೨೦, ೨೦೦೬ (ಆಷಾಢ ೨೯, ಶಕ ವರ್ಷ ೧೯೨೮) | ಸಂಚಿಕೆ ೨೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ರಾಮಕೃಷ್ಣ, ಹೆಚ್‌ಸಿ-115, ಬಸರಾಳು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇ ವರ ಜ್ಞಾಪನ ಸಂಖ್ಯೆ:ಸಿಬ್ಬಂದಿ/5/ಒಬಿ/422/ 2004-05, ದಿನಾಂಕ:28-02-2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇ ವರ ಆದೇಶ ಸಂಖ್ಯೆ:ಅಪೀಲು/1/2005-06, ದಿನಾಂಕ:08-07-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06-12-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/4/2006, ದಿನಾಂಕ:18-03-2006.

ಪ್ರಸ್ತಾವನೆ:-

ಶ್ರೀ ರಾಮಕೃಷ್ಣ, ಸಿಹೆಚ್‌ಸಿ-115 ಬಸರಾಳು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇ ವರು ದಿನಾಂಕ:04-11-2004 ರಿಂದ 21-12-2004ರ ವರೆಗೆ ಒಟ್ಟು 48 ದಿನಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣ ಇ ಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇ ವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:28-02-2005ರ ಜ್ಞಾಪನದಲ್ಲಿ ಅರ್ಜಿದಾರರ ಗೈರುಹಾಜರಿ ಅವಧಿಯನ್ನು ವೇತನ ರಹಿತ ರಜೆ ಎಂದು ಕೆಸಿಎಸ್‌ಆರ್ ನ ನಿಯಮ 106 (ಎ) ರಡಿ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-07-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇ ಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ತಮಗೆ ಮೈಯಲ್ಲಿ ಹುಷಾರಿಲ್ಲದಿದ್ದರೆ, ಅಥವಾ ಅಪಘಾತವಾಗಿದ್ದರೆ, ಮೇಲಾಧಿಕಾರಿಗಳಿಗೆ ದೂರವಾಣಿ ಮುಖಾಂತರವಾದರೂ ತಿಳಿಸಬಹುದಾಗಿತ್ತು. ಯಾರಿಗೂ ಹೇಳದೆ ಕರ್ತವ್ಯಕ್ಕೆ ಗೈರುಹಾಜರಾಗಿ, ದುರ್ನಡತೆ ಪ್ರದರ್ಶಿಸಿರುವುದು ಇ ವರ ಬೇಜವಾಬ್ದಾರಿತನಕ್ಕೆ ಸಾಕ್ಷಿ ಆಗಿದೆ. MHS ಪುಸ್ತಕ ಪಡೆಯದೇ, ತನಗೆ ಅಪಘಾತವಾದ ಬಗ್ಗೆ ತಿಳಿಸದೆ, 48 ದಿನಗಳು ಕರ್ತವ್ಯಕ್ಕೆ ಗೈರು ಹಾಜರಾಗಿದ್ದು, ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇ ವಿ 2001, ದಿನಾಂಕ:14-09-2001ರ ಪ್ರಕಾರ ಮೂರು ವಾರ್ಷಿಕ ವೇತನ ಬಡ್ತಿ ತಡೆ ಹಿಡಿಯುವ ದಂಡನೆ ವಿಧಿಸಬಹುದೆಂದಿದೆ. ಆದರೂ, ಶಿಸ್ತು ಪ್ರಾಧಿಕಾರಿಯು ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ಮಾನವೀಯ

ದೃಷ್ಟಿಯಿಂದ ಕೇವಲ `ವೇತನ ರಹಿತ ರಜೆ` ಎಂದು ಪರಿಗಣಿಸಿರುವ ಕಾರಣ, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪೊಸಿಅ 2006 ಬೆಂಗಳೂರು, ದಿನಾಂಕ:25ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಕೃಷ್ಣ, ಹೆಚ್‌ಸಿ-115 ಬಸರಾಳು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:06-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 886

**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕರೀಮ್ ಷರೀಫ್, ಮಾಜಿ ಎಪಿಸಿ., ಡಿ.ಎ.ಆರ್., ತುಮಕೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇ ವರ ಆದೇಶ ಸಂಖ್ಯೆ: ಪನ್ಸಿ/ಡಿಇ /28/01-02, ಓಬಿ ಸಂಖ್ಯೆ: 153/02, ದಿನಾಂಕ:01-08-2002.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು, ಇ ವರ ಆದೇಶ ಸಂಖ್ಯೆ:ಅಪೀಲು/43/2002-03, ಓಬಿ ಸಂಖ್ಯೆ:166/2002-03, ದಿನಾಂಕ:07-02-2003.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-05-2003.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/53/2003-04, ದಿನಾಂಕ:15-10-2003.

**ಪ್ರಸ್ತಾವನೆ:-**

ಶ್ರೀ ಕರೀಂ ಶರೀಫ್, ಎಪಿಸಿ-91, ಡಿಎಆರ್, ತುಮಕೂರು ಇ ವರ ವಿರುದ್ದ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

``ನೀವು ದಿನಾಂಕ:18-09-2001 ರಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಈ ಬಗ್ಗೆ ನಿಮಗೆ ಕ್ರಮ ಸಂಖ್ಯೆ:ಸಿಬ್ಬಂದಿ:(3)1:02, ದಿನಾಂಕ:02-01-2002ರಂದು ಕೆ.ಪಿ.ಎ. ಆದೇಶ 525ರ ಅನ್ವಯ ಕರ್ತವ್ಯ ತ್ಯಜಿಸಿದ ನೋಟೀಸನ್ನು ನೀಡಲಾಗಿದ್ದು, ನೀವು ಅದನ್ನು ದಿನಾಂಕ:05-01-2002ರಂದು ಪಡೆದುಕೊಂಡು ಒಂದು ತಿಂಗಳ ಅವಧಿ ಮುಗಿದರೂ ಸಹ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ತೋರಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಇ ಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ತುಮಕೂರು, ಇ ವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:01-08-2002ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು, ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07-02-2003ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯು ವಿಧಿಸಿದ ಕಡ್ಡಾಯ ನಿವೃತ್ತಿ ಎಂಬುದನ್ನು ಭಾಗಶ: ಮಾರ್ಪಡಿಸಿ, `ಸ್ವಯಂ ನಿವೃತ್ತಿ` ಎಂದು ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾನು ಗಡ್ಡ ಬಿಟ್ಟಿದ್ದೇನೆಂದೂ, ಮುಸ್ಲಿಂ ಜನಾಂಗದವರು ಮಕ್ಕಾ ಯಾತ್ರೆಗೆ ಹೋಗಿ ಬಂದ ನಂತರ ಗಡ್ಡ ಬೆಳೆಸುವುದು ಸಂಪ್ರದಾಯವೆಂದೂ, ಗಡ್ಡ ಬಿಡಲು ಅವಕಾಶ ನೀಡದಿರುವ ಕಾರಣ, ತಾನು ಕರ್ತವ್ಯಕ್ಕೆ ಗೈರು ಹಾಜರಾಗಿ ರುವುದಾಗಿ ತಿಳಿಸಿ, ನಿಯಮಗಳನ್ನು ತಿದ್ದುಪಡಿ ಮಾಡಿ, ತನ್ನನ್ನು ಕರ್ತವ್ಯಕ್ಕೆ ತೆಗೆದುಕೊಳ್ಳಲು ಕೋರಿರುತ್ತಾರೆ. ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಅರ್ಜಿದಾರರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಇ ಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದ್ದ ಹಿನ್ನೆಲೆಯಲ್ಲಿ ದಂಡನೆ ವಿಧಿಸಲಾಗಿದೆ. ಯಾವುದೇ ಹಂತದಲ್ಲೂ ಗಡ್ಡ ಬಿಟ್ಟಿರುವ ಬಗ್ಗೆ ಇ ಲಾಖಾ ವಿಚಾರಣೆ ನಡೆಸಿರುವುದಿಲ್ಲ. ಸಿಆಸು ಇ ಲಾಖೆಯ ಸುತ್ತೋಲೆಯ ಸಂಖ್ಯೆ:ಸಿಆಸುಇ 18 ಸೇಇ ವಿ 2001, ದಿನಾಂಕ:14-09-2001ರ ಪ್ರಕಾರ 4 ತಿಂಗಳಿಗಿಂತ ಮೇಲ್ಪಟ್ಟ ಅವಧಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದರೆ `ಸೇವೆಯಿಂದ ತೆಗೆದುಹಾಕುವ ದಂಡನೆ` ವಿಧಿಸಬಹುದಾಗಿದ್ದು, ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ಅವರ ಇ ಚ್ಛೆಯಂತೆ ಅವರನ್ನು ಸೇವೆಯಿಂದ `ಸ್ವಯಂ ನಿವೃತ್ತಿ` ಗೊಳಿಸಲಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿ ಮತ್ತು ಮೇಲ್ಮನವಿ

ಪ್ರಾಧಿಕಾರಿ ವಿಧಿಸಿರುವ ದಂಡನಾ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 112 ಪೊಸಿಅ 2003 ಬೆಂಗಳೂರು ದಿನಾಂಕ:26ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕರೀಂ ಷರೀಫ್, ಮಾಜಿ ಎಪಿಸಿ-91, ಡಿಎಆರ್, ತುಮಕೂರು, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16-05-2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 888

**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಲಿಂಗರಾಜು, ಹವಲ್ದಾರ್ ನಂ. 30, 9ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ., ಬೆಂಗಳೂರು, ಇ ವರ ಆದೇಶ ಸಂಖ್ಯೆ:66/ಡಿಇ /2001-02, ದಿನಾಂಕ:19-07-2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಆದೇಶ ಸಂಖ್ಯೆ:ಅಪೀಲು/6/36/2002-03, ದಿನಾಂಕ:02-04-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-06-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇ ವರ ಪತ್ರ ಸಂಖ್ಯೆ:ಅಪೀಲು/2/33/2005, ದಿನಾಂಕ:10-08-2005.

**ಪ್ರಸ್ತಾವನೆ:-**

ಶ್ರೀ ಲಿಂಗರಾಜು, ಹವಲ್ದಾರ್-30 9ನೇ ಪಡೆ, ಕೆಎಸ್ಆರ್‌ಪಿ., ಬೆಂಗಳೂರು, ಇ ವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

''ದಿನಾಂಕ:06-08-2000ರಂದು ಪೂರ್ವಾಹ್ನ ಸಮಯ 10-30 ಘಂಟೆಗೆ ಹವಲ್ದಾರ್ ವಾಹನ ಚಾಲಕ ಸಂಖ್ಯೆ:30, ಲಿಂಗರಾಜು, ಕೇಂದ್ರ ದಳ, 9ನೇ ಪಡೆ, ಕೆಎಸ್ಆರ್‌ಪಿ., ಆದ ನೀವು ಸರ್ಕಾರಿ ವಾಹನ ಸಂಖ್ಯೆ:ಕೆಎ-01-ಜಿ-8221 (ವಾಟರ್ ಟ್ಯಾಂಕರ್)ನ್ನು ಕಮಿಷರಿಯೇಟ್ ಹಾಗೂ ಮಗರತ್ ರೋಡ್ ಜಂಕ್ಷನ್ನಿನಲ್ಲಿ ಅತೀ ವೇಗ ಹಾಗೂ ಅಜಾಗರೂಕತೆಯಿಂದ ಚಲಿಸಿ, ದ್ವಿಚಕ್ರ ವಾಹನ (ಹೀರೋಪುಕ್) ಸಂಖ್ಯೆ:ಕೆಎ-14-ಹೆಚ್-5439 ಇ ದಕ್ಕೆ ಡಿಕ್ಕಿ ಹೊಡೆದು ಅಪಘಾತಕ್ಕೆ ಈಡು ಮಾಡಿ ಸದರಿ ವಾಹನ ಚಾಲಕ ಹಾಗೂ ಹಿಂಭಾಗದಲ್ಲಿ ಕುಳಿತುಕೊಂಡಿದ್ದ ವಿ.ಕೆ.ಪ್ರಕಾಶ್, ರವರಿಗೆ ಗಾಯಗೊಳಿಸಿ ನಂತರ ಹಿಂಭಾಗದಲ್ಲಿ ಕುಳಿತುಕೊಂಡಿದ್ದ ವಿ.ಕೆ.ಪ್ರಕಾಶ್, ರವರು ಮೃತಪಟ್ಟ ಬಗ್ಗೆ ದೋಷಾರೋಪಣೆ.''

ಮೇಲ್ಕಂಡ ಆರೋಪದ ಮೇಲೆ ಇ ಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆಎಸ್ಆರ್‌ಪಿ., ಬೆಂಗಳೂರು ಇ ವರು ಸೀನಿಯರ್ ಮೋಟಾರ್ ವಹಿಕಲ್ ಇ ನ್ಸ್‌ಪೆಕ್ಟರ್, ಇ ಂದಿರಾನಗರ ಹಾಗೂ ಅಪಘಾತ ನಡೆದ ಸ್ಥಳ, ಪರಿಸ್ಥಿತಿಯ ಆಧಾರದ ಮೇಲೆ ಆರೋಪ ರುಜುವಾತಾಗಿದೆ ಎಂದು ಅಭಿಪ್ರಾಯ ಪಟ್ಟು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:19-07-2002ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇ ವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರ ಸೇವೆಯನ್ನು ಪರಿಗಣಿಸಿ, ಮಾನವೀಯ ದೃಷ್ಟಿಯಿಂದ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02-04-2004ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ಮುಂದಿನ ವಾರ್ಷಿಕ ವೇತನಕ್ಕೆ ಧಕ್ಕೆ ಆಗದಂತೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ ಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರೋಪಕ್ಕೆ ಸಂಬಂಧಿಸಿದಂತೆ ಅಶೋಕನಗರ ಪೊಲೀಸ್ ಠಾಣೆಯಲ್ಲಿ ಮೊ.ಸಂಖ್ಯೆ:504/2000 ಕಲಂ 279, 337, 304 (ಎ) IPC ಅಡಿಯಲ್ಲಿ ದಾಖಲಾಗಿದ್ದು, ಘನ ನ್ಯಾಯಾಲಯವು ಅರ್ಜಿದಾರರನ್ನು ಬೆನಿಫಿಟ್ ಆಫ್ ಡೌಟ್ ಮೇಲೆ ನಿರಪರಾಧಿ ಎಂದು ತೀರ್ಪು ನೀಡಿದೆ. ಆದರೆ, ಇ ಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲವೆಂದಿದ್ದರೂ, ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ,

ಅರ್ಜಿದಾರರು ಅತೀ ವೇಗ ಹಾಗೂ ಅಜಾಗರೂಕತೆಯಿಂದ ವಾಹನ ಚಲಿಸಿ, ದ್ವಿಚಕ್ರ ವಾಹನಕ್ಕೆ ಡಿಕ್ಕಿ ಹೊಡೆದು ಅಪಘಾತಕ್ಕೆ ಈಡು ಮಾಡಿರುವುದು ರುಜುವಾತಾಗಿದ್ದ ಕಾರಣ, ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುತ್ತಾರೆ. ಶಿಸ್ತು ಪ್ರಾಧಿಕಾರಿಯ ದಂಡನೆ ಅತೀ ಹೆಚ್ಚಿನದೆಂದು ಪರಿಗಣಿಸಿ ಮೇಲ್ಮನವಿ ಪ್ರಾಧಿಕಾರಿಯು ದಂಡನೆಯನ್ನು ಕಡಿಮೆ ಮಾಡಿರುತ್ತಾರೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ಹಾಗೂ ಮೇಲ್ಮನವಿ ಪ್ರಾಧಿಕಾರಿಗಳು ವಿಧಿಸಿರುವ ದಂಡನಾ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 28 ಪೊಸಿಅ 2004 ಬೆಂಗಳೂರು ದಿನಾಂಕ:25ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಲಿಂಗರಾಜು, ಹವಲ್ದಾರ್ 30, 9ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು, ಇ ವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:28-06-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 889

## ENERGY SECRETARIAT

**Sub :** Setting up of a Committee to examine issues pertaining to the proposal to establish a 4,000 MW Ultra Mega Thermal power project at Tadri, Uttara Kannada District – Inclusion of three Technical Experts as Additional Members.

**Read :** G.O. No. EN5 PPC2006, Bangalore, dated 22.5.2006.

**PREAMBLE**:

In the Government Order read above, 14 Members were nominated to the Committee to examine issues pertaining to the proposal to establish a 4,000 MW Ultra Mega Thermal power project at Tadri in the Uttara Kannada District. In pursuance of the above mentioned Government Order, a meeting of the Committee was held on 31.5.2006 under the Chairmanship of the Principal Secretary to Government, Energy Department, in his Chambers. In the Meeting, some members requested to include the following three Technical Experts as additional members in the Committee.

1) Sri. Y.B. Ramakrishna, Samagra Vikasa, Bangalore. (Alternative sources of Energy).
2) Dr. V.N. Nayak, Chairman, Marine Biology, P.G. Centre, Karnataka University, Karwar.
3) Prof. Subhas Chandran, Kumta (Botanist).

Government has considered the request of the Committee Members and hence this order.

**GOVERNMENT ORDER NO. EN5 PPC 2006, BANGALORE,DATED: 2nd June 2006**

Government is pleased to include the following three Technical Experts as additional members, on the Committee to examine the proposal of setting up of a 4,000 MW Ultra Mega Thermal power project at Tadri, Uttara Kannada District.

1) Sri. Y.B. Ramakrishna, Bangalore.
2) Dr. V.N. Nayak, Karwar.
3) Prof. Subhas Chandran, Kumta.

BY ORDER AND IN THE NAME OF THE
GOVERNOR OF KARNATAKA,
**Suresh B. Krishnappanavar**
Under Secretary to Government,
Energy Department.

P.R. 876

**Sub :** Enhancement of Capacity of Bio-Mass Power Plant from 3.2 MW to 7.00 MW in favour of M/s Siriguppa Renewable Energy Private Limited-reg.

**Read :** 1. Government Order No : DE 79 NCE 2000, dated: 10.07.2000.

2. Government letter No: DE 143 NCE 2001 dated: 10.1.2001.

3. Letter No: KRED/03/SPCL/06/1180, dated: 24.05.2006 received from the Managing Director, Karnataka Renewable Energy Development Limited, Bangalore.

**PREAMBLE**:

In the Government order read at (1) above, the sanction has been accorded to implement 3.2 MW capacity Bio-Mass Power Plant at Siriguppa Bellary District in favour of M/s Siriguppa Power Corporation Limited.

In Government letter read at (2) above permission was accorded to change the company name from M/s Siriguppa Power Corporation Limited to M/s Siriguppa Renewable Energy Private Limited.

In the letter read at (3) above, the Managing Director, Karnataka Renewable Energy Development Limited, Bangalore, had recommended to Government to enhance the existing capacity of the Bio-mass Power Plant from 3.2 MW to 7.00 MW to improve the project viability.

The proposal has been examined at the Government level and hence the following order:

**Government Order No: EN 229 NCE 2006, Bangalore, Dated: 06th June 2006.**

Government is pleased to enhance the existing capacity of Bio-Mass Power Plant from 3.2 MW to 7.00 MW at Plant at Siriguppa Bellary District in favour of M/s Siriguppa Renewable Energy Private Limited.

The other terms and conditions of the order read at (1) above shall continue as it is.

BY ORDER AND IN THE NAME OF
GOVERNOR OF KARNATAKA,
**Suresh B. Krishnappanavar**
Under Secretary to Government,
Energy Department.

P.R. 900

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸುವ ಬಗ್ಗೆ ಆದೇಶ

**ಓದಲಾಗಿದೆ:** 2006-07 ನೇ ರಾಜ್ಯ ಆಯವ್ಯಯದಲ್ಲಿ ಪರಿಶಿಷ್ಟ ಪಂಗಡಗಳಿಗೆ ಪ್ರತ್ಯೇಕ ಅಭಿವೃದ್ಧಿ ನಿಗಮವನ್ನು ಸ್ಥಾಪಿಸುವ ಬಗ್ಗೆ ಘೋಷಣೆ

**ಪ್ರಸ್ತಾವನೆ:**

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆರ್ಥಿಕ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು 1975ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತವನ್ನು ಸ್ಥಾಪಿಸಿದೆ. ಈ ನಿಗಮವು ಹಾಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಆರ್ಥಿಕ, ಸಾಮಾಜಿಕ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ಅನುಮೋದಿಸಿದ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯಗತಗೊಳಿಸುತ್ತಿದೆ. ಕರ್ನಾಟಕ ರಾಜ್ಯ ಸರ್ಕಾರವು ಪರಿಶಿಷ್ಟ ಪಂಗಡಕ್ಕೆ ವಿಶೇಷ ಆದ್ಯತೆ ನೀಡುವ ದೃಷ್ಟಿಯಿಂದ ಅವರ ಅಭ್ಯುದಯಕ್ಕಾಗಿ ಪ್ರತ್ಯೇಕ ಪರಿಶಿಷ್ಟ ಪಂಗಡಗಳ ಅಬಿವೃದ್ಧಿ ನಿಗಮವನ್ನು 2006-07ನೇ ಸಾಲಿನಲ್ಲಿ ಸ್ಥಾಪಿಸಲಾಗುವುದೆಂದು ದಿನಾಂಕ:20-03-06ರಂದು ಸದನದಲ್ಲಿ ಮಂಡಿಸಿದ ಆಯವ್ಯಯ ಭಾಷಣದಲ್ಲಿ ಘೋಷಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 65 ಎಸ್‌ಡಿಸಿ 04, ಬೆಂಗಳೂರು ದಿನಾಂಕ: 27ನೇ ಮೇ 06**

ಕರ್ನಾಟಕ ರಾಜ್ಯದಲ್ಲಿನ ಪರಿಶಿಷ್ಟ ಪಂಗಡಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮವೆಂಬ ಶಿರೋನಾಮೆಯೊಂದಿಗೆ ಒಂದು ಪ್ರತ್ಯೇಕ ಅಭಿವೃದ್ಧಿ ನಿಗಮವನ್ನು 2006-07ನೇ ಸಾಲಿನಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಾಪಿಸಲು ಸರ್ಕಾರವು ಮಂಜೂರಾತಿ ನೀಡಿದೆ.

1956ರ ಭಾರತೀಯ ಕಂಪನಿಗಳ ಅಧಿನಿಯಮದಡಿ ಈ ನಿಗಮವನ್ನು ನೋಂದಾಯಿಸಲು ನಿಯಮಾನುಸಾರ ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇ ಲಾಖೆ ಇ ವರು ಮುಂದಿನ ಸೂಕ್ತ ಕ್ರಮಗಳನ್ನು ಜರುಗಿಸತಕ್ಕದ್ದು.

ನಿಗಮದ ಅಧಿಕೃತ ಷೇರು ಬಂಡವಾಳ, ಪ್ರವರ್ತಕ ನಿರ್ದೇಶಕರು ಹಾಗು ನಿರ್ದೇಶಕ ಮಂಡಳಿಯ ರಚನೆ ಇ ತ್ಯಾದಿ ವಿವರಗಳಿಗೆ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಎ.ಎಂ.ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇ ಲಾಖೆ

ಪಿ.ಆರ್. 929

**ವಿಷಯ:** ಭೂ ಒಡೆತನ ಯೋಜನೆಯಡಿಯಲ್ಲಿ ಘಟಕ ವೆಚ್ಚವನ್ನು ಮಾರ್ಗಸೂಚಿ ಬೆಲೆಗೆ ಹೆಚ್ಚಿಸುವ ಬಗ್ಗೆ - ಮಂಜೂರಾತಿ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 168 ಎಸ್‌ಡಿಸಿ 2000, ದಿನಾಂಕ: 04-08-2000

2) ವ್ಯವಸ್ಥಾಪಕ ನಿರ್ದೇಶಕರು, ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ಇ ವರ ಪತ್ರ ಸಂಖ್ಯೆ: ಡಾ. ಬಿ.ಆರ್.ಅಂ.ಅ.ನಿ: ಭೂಒಯೋ : ಮಾಸೂಬೆ : 2006-07 1167 ದಿನಾಂಕ: 17-04-06

3) ದಿನಾಂಕ:31-05-06ರಂದು ನಡೆದ ಅಧಿಕಾರಯುಕ್ತ ಸಮಿತಿಯ ನಡವಳಿಗಳು

**ಪ್ರಸ್ತಾವನೆ:**

ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವು 1990-91ನೇ ಸಾಲಿನಿಂದ ಭೂ ಒಡೆತನ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ. ಈ ಯೋಜನೆಯಡಿ ಎರಡು ಎಕರೆ ಖುಷ್ಕಿ ಜಮೀನು ಅಥವಾ ಒಂದು ಎಕರೆ ತರಿ ಜಮೀನನ್ನು ಖರೀದಿಸಲು ಶೇ.50ರಷ್ಟು ಸಹಾಯಧನ ಮತ್ತು ಶೇ.50ರಷ್ಟು ಸಾಲದ ರೂಪದಲ್ಲಿ ಅವಕಾಶವಿರುತ್ತದೆ. ಈ ಭೂ ಒಡೆತನ ಯೋಜನೆಯ ಗರಿಷ್ಟ ಘಟಕ ವೆಚ್ಚವನ್ನು ರೂ.50,000/-ದಿಂದ ರೂ.60,000/-ಗಳಿಗೆ ಹೆಚ್ಚಿಸಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಾ;ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ ಇ ವರು ಸರ್ಕಾರವು ನಿಗದಿಪಡಿಸಿದ ರೂ.60,000/-ಗಳ ಘಟಕ ವೆಚ್ಚದಲ್ಲಿ ಉತ್ತಮ ಕೃಷಿ ಜಮೀನು ಬಹಳಷ್ಟು ಜಿಲ್ಲೆಗಳಲ್ಲಿ ಲಭ್ಯವಾಗದೇ ಇ ರುವುದನ್ನು ಮನಗಂಡು ಭೂ ಒಡೆತನ ಯೋಜನೆಯಡಿ ನಿಗದಿಪಡಿಸಿದ ಘಟಕ ವೆಚ್ಚವನ್ನು ನೋಂದಣಿ ಇ ಲಾಖೆ ಹೊರಡಿಸಿರುವ ಮಾರ್ಗಸೂಚಿ ಬೆಲೆಗೆ ಅನುಸಾರವಾಗಿ ಹೆಚ್ಚಿಸಬೇಕೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ. 2006-07ನೇ ಸಾಲಿನ ಆಯವ್ಯಯ ಭಾಷಣದಲ್ಲಿ ನಿಗಮವು ಅನುಷ್ಠಾನಗೊಳಿಸುತ್ತಿರುವ ಜಮೀನು ಖರೀದಿ ಯೋಜನೆಯು ದುರ್ಬಲ ವರ್ಗದವರಿಗೆ ಆಹಾರ ಸುರಕ್ಷತೆ ಒದಗಿಸುವ ಮತ್ತು ಅವರ ಆದಾಯ ಮಟ್ಟ ಹಾಗೂ ಸಾಮಾಜಿಕ ಸ್ಥಾನವನ್ನು ಹೆಚ್ಚಿಸುವ ಗುರಿ ಹೊಂದಿದ್ದು, ಜಮೀನಿನ ಬೆಲೆ ಹೆಚ್ಚಳವಾಗಿರುವ ಹಿನ್ನೆಲೆಯಲ್ಲಿ ಘಟಕ ವೆಚ್ಚದ ಏರಿಕೆಯನ್ನು ನೋಂದಣಿ ಇ ಲಾಖೆಯ ಮಾರ್ಗಸೂಚಿ ಮೌಲ್ಯದ ಜೊತೆ ಸಂಯೋಜಿಸಲು ಘೋಷಿಸಲಾಗಿದೆ. ಈ ವಿಷಯವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ದಿನಾಂಕ:31-05-06ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯಲ್ಲಿ ಮಂಡಿಸಲಾಗಿದ್ದು, ಸಮಿತಿಯು ಸದರಿ ಘಟಕ ವೆಚ್ಚವು ತುಂಬಾ ಕಡಿಮೆ ಇ ರುವುದರಿಂದ, ಮಾರುಕಟ್ಟೆ ಬೆಲೆಗೆ ಜಮೀನನ್ನು ಖರೀದಿಸಲು ಕಷ್ಟಸಾಧ್ಯವಾಗುತ್ತಿರುವುದರಿಂದ, ಇ ದನ್ನು ಮಾರ್ಗಸೂಚಿ ಬೆಲೆಗೆ ಹೆಚ್ಚಿಸುವ ಬಗ್ಗೆ ಸಮಿತಿಯು ತನ್ನ ಒಪ್ಪಿಗೆ ನೀಡಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 42 ಎಸ್‌ಡಿಸಿ 04(ಭಾ), ಬೆಂಗಳೂರು ದಿನಾಂಕ: 06ನೇ ಜೂನ್ 2006**

ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ಭೂ ಒಡೆತನ ಯೋಜನೆಯ ಘಟಕ ವೆಚ್ಚವನ್ನು ರಾಜ್ಯದ ಪ್ರತಿಯೊಂದು ಹಳ್ಳಿಗಳಿಗೆ ನೋಂದಣಿ ಇ ಲಾಖೆ ನಿಗದಿಪಡಿಸಿರುವ ಮಾರ್ಗಸೂಚಿ ಬೆಲೆಗೆ ಅನುಗುಣವಾಗಿ ಜಮೀನನ್ನು ಖರೀದಿಸಲು 2006-07 ನೇ ಸಾಲಿನಿಂದ ಜಾರಿಗೆ ಬರುವಂತೆ ಸರ್ಕಾರವು ಮಂಜೂರಾತಿ ನೀಡಿದೆ.

ಮೇಲ್ಕಂಡ ಆದೇಶವನ್ನು ಹೊರತುಪಡಿಸಿ ಭೂ ಒಡೆತನ ಯೋಜನೆಯ ಇ ತರೆ ಷರತ್ತುಗಳು ಈ ಹಿಂದೆ ಇ ದ್ದಂತೆಯೇ ಅನ್ವಯವಾಗತಕ್ಕದ್ದು.

ಈ ಆದೇಶವನ್ನು ದಿನಾಂಕ:31-05-06ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯ ನಡವಳಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 930

**ಎ.ಎಂ.ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇ ಲಾಖೆ

**ವಿಷಯ:** ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ನೀರಾವರಿ ಕೊಳವೆಬಾವಿ ಘಟಕ ವೆಚ್ಚವನ್ನು ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 170 ಎಸ್‌ಡಿಸಿ 01 ದಿನಾಂಕ: 22-03-02

2) ದಿನಾಂಕ:31-05-06ರಂದು ನಡೆದ ಅಧಿಕಾರಯುಕ್ತ ಸಮಿತಿಯ ಸಭಾ ನಡವಳಿಗಳು

3) ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 02 ದಿನಾಂಕ: 06-06-06

**ಪ್ರಸ್ತಾವನೆ:**

ಮೇಲೆ ಓದಲಾದ (3)ರ ದಿನಾಂಕ:06-06-06ರ ಸರ್ಕಾರಿ ಆದೇಶದಲ್ಲಿ ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಅನ್ವಯವಾಗುವಂತೆ ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆಯಡಿ ಘಟಕ ವೆಚ್ಚವನ್ನು ಪರಿಷ್ಕರಿಸಿ ಗರಿಷ್ಟ ರೂ.75,000/-ರಿಂದ ರೂ.1.00ಲಕ್ಷಕ್ಕೆ ಹಾಲಿ ಇ ರುವ ಧನ ಸಹಾಯದ ಮಾದರಿಯಲ್ಲಿಯೇ ನೂತನ ಫಲಾನುಭವಿಗಳು 2006-07ನೇ ಆರ್ಥಿಕ ಸಾಲಿನಿಂದ ಜಾರಿಗೆ ಬರುವಂತೆ ಮಂಜೂರಾತಿ ನೀಡಿ ಹೆಚ್ಚಿಸಲಾಗಿದೆ. ಇ ದರಿಂದಾಗಿ ಈಗ ಪ್ರತಿ ಕೊಳವೆ ಬಾವಿಗೆ ರೂ.86,000/-ಗಳ ಸಹಾಯಧನ ಹಾಗೂ ರೂ.14,000/-ಗಳು ಸಾಲದ ರೂಪವಾಗಿರುತ್ತದೆ. ಇ ದಲ್ಲದೆ ವಿದ್ಯುಚ್ಛಕ್ತಿ ಸರಬರಾಜು ನಿಗಮಕ್ಕೆ ಕಟ್ಟಬೇಕಾದ ಠೇವಣಿ ಮೊತ್ತವನ್ನು ಈ ಸಹಾಯಧನದ ಮಿತಿಯೊಳಗೆಯೇ ಭರಿಸತಕ್ಕದ್ದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2) ದಿನಾಂಕ:31-05-06ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ:31-05-06ರ ಸಭೆಯ ನಡವಳಿಯಂತೆ ಅಧಿಕಾರಯುಕ್ತ ಸಮಿತಿಯು ಸಮಾಜ ಕಲ್ಯಾಣ ಇ ಲಾಖೆಯು ಕಾರ್ಯಗತಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ಕೊಳವೆಬಾವಿಯ ಘಟಕ ವೆಚ್ಚವನ್ನು ರೂ.75,000/-ದಿಂದ ರೂ.1.00 ಲಕ್ಷಕ್ಕೆ ಹೆಚ್ಚಿಸಲು ತೀರ್ಮಾನಿಸಿತ್ತು. ಈ ಯೋಜನೆಯನ್ನು ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ಡಿ.ದೇವರಾಜ ಅರಸ್ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳು ಅನುಷ್ಠಾನಗೊಳಿಸುತ್ತಿದೆ. ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮಕ್ಕೆ ಅನ್ವಯಿಸಿ ಹೊರಡಿಸಿದ್ದ ಮೇಲೆ ಓದಲಾದ (3) ದಿನಾಂಕ:06-06-06ರ ಆದೇಶವನ್ನು ಭಾಗಶ: ಮಾರ್ಪಡಿಸಿ ಇ ತರೇ ನಿಗಮಗಳಿಗೂ ಅನ್ವಯಿಸುವಂತೆ ಸದರಿ ಆದೇಶವನ್ನು ಹೊರಡಿಸಬೇಕಾಗಿದೆ. ಅಂತೆಯೇ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 02, ಬೆಂಗಳೂರು ದಿನಾಂಕ:16ನೇ ಜೂನ್ 06**

ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 02, ದಿನಾಂಕ:06-06-06ರ ಸರ್ಕಾರಿ ಆದೇಶದ ಮೊದಲನೆಯ ಕಂಡಿಕೆಯನ್ನು ಭಾಗಶ: ಮಾರ್ಪಡಿಸುತ್ತಾ, ಸದರಿ ಕಂಡಿಕೆಯಲ್ಲಿ ನಮೂದಿಸಲಾಗಿರುವ "ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವು" ಎಂಬ ವಾಕ್ಯವೃಂದದ ನಂತರ ''ಡಿ.ದೇವರಾಜ ಅರಸ್ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳು'' ಎಂಬ ವಾಕ್ಯವೃಂದವನ್ನು ಹಾಗೂ ಅದೇ ಕಂಡಿಕೆಯ ಕೊನೆಯಲ್ಲಿ ಕಾಣಿಸುವ ''ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮವೇ'' ಎಂಬ ವಾಕ್ಯವೃಂದದ ಬದಲಾಗಿ ''ಸಂಬಂಧಪಟ್ಟ ನಿಗಮಗಳೇ'' ಎಂಬ ವಾಕ್ಯವೃಂದವನ್ನು ಸೇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಎ.ಎಂ.ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇ ಲಾಖೆ

ಪಿ.ಆರ್. 960

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎನ್.ಹನುಮಂತಯ್ಯ, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಶ್ರೀ ಎ.ಜಿ.ಪತ್ರೇಕರ್, ಗ್ರಾಮ ಲೆಕ್ಕಿಗರ ವಿರುದ್ಧ ಇ ಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 110 ಎಸ್‌ಇ ಎನ್ 02 ದಿನಾಂಕ:11.10.02.
2) ವಿಚಾರಣಾ ವರದಿ ಕ್ರಮಾಂಕ : ಲೋಕ್ / ಎಆರ್‌ಇ -4 / ಇ ಎನ್‌ಕ್ಯೂ-79 / 02-03:ದಿ: 29.10.04.
3) ಸನ್ಮಾನ್ಯ ಉಪ ಲೋಕಾಯುಕ್ತರ ಪತ್ರ ಕ್ರಮಾಂಕ:ಲೋಕ್/ಎಆರ್‌ಇ - 4/ಇ ಎನ್‌ಕ್ಯೂ-79/02-03 ದಿ:03.11.05.
4) ನೋಟೀಸ್ ಕ್ರಮಾಂಕ:ಸಿಆಸುಇ 110 ಎಸ್‌ಇ ಎನ್ 02 ದಿನಾಂಕ:09.12.05.
5) ಶ್ರೀ ಎ.ಜಿ.ಪತ್ರೇಕರ್, ಗ್ರಾಮ ಲೆಕ್ಕಿಗ ಅವರ ಉತ್ತರ ದಿ:09.01.06.

**ಪ್ರಸ್ತಾವನೆ:**

ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು ತಹಶೀಲ್ದಾರ್‌ರಾಗಿ ಶ್ರೀ ಹೆಚ್.ಎನ್.ಹನುಮಂತಯ್ಯ ಅವರು, ಚಿತ್ತಾಕುಲ ಗ್ರಾಮದ ಗ್ರಾಮ ಲೆಕ್ಕಿಗರಾಗಿ ಶ್ರೀ ಎ.ಜಿ.ಪತ್ರೇಕರ್ ಅವರು ಕಾರ್ಯನಿರ್ವಹಿಸುತ್ತಿದ್ದಾಗ ಉತ್ತರ ಕನ್ನಡ ಜಿಲ್ಲೆ, ಕಾರವಾರ ತಾಲ್ಲೂಕು ಚಿತ್ತಾಕುಲ ಗ್ರಾಮದ ಸ.ನ.293/3ರ ಜಮೀನಿನ ಮಾಲೀಕತ್ವ ಕುರಿತು ಕೋರ್ಟ್ ಡಿಕ್ರಿಯಲ್ಲಿ ಹೆಸರು ಇ ಲ್ಲದಿರುವ ಡಾ.ಹುಮಾಯೂನ್ ಮೊಹಮದ್ ಷೇಖ್ ಎಂಬುವವರ ಹೆಸರನ್ನು ಜಮೀನಿನ ಮ್ಯುಟೇಷನ್ ದಾಖಲೆಯಲ್ಲಿ ನಮೂದಿಸಿ ಖೋಟಾ ವ್ಯಕ್ತಿಗಳು ಪರಿಹಾರ ಧನ ಪಡೆಯಲು ಅವಕಾಶ ಮಾಡಿಕೊಟ್ಟಿರುವ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಶ್ರೀ ಹೆಚ್.ಎನ್.ಹನುಮಂತಯ್ಯ, ಮತ್ತು ಶ್ರೀ ಎ.ಜಿ.ಪತ್ರೇಕರ್ ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿ:11.10.02ರ ಸರ್ಕಾರಿ ಆದೇಶದಲ್ಲಿ ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ಪೂರ್ಣ ಪ್ರಮಾಣದ ಇ ಲಾಖಾ ವಿಚಾರಣೆ ನಡೆಸಲು ಅವರಿಗೆ ವಹಿಸಿ ಆದೇಶಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಹೆಚ್ಚುವರಿ ನಿಬಂಧಕರು ವಿಚಾರಣೆಗಳು-4 ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ದಿ:29.10.04ರ ವಿಚಾರಣಾ ವರದಿಯನ್ನು ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿದ್ದರು.

ಶ್ರೀ ಹೆಚ್.ಎನ್.ಹನುಮಂತಯ್ಯ ಅವರು 1993ರಲ್ಲಿ ಕಾರವಾರ ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿತ್ತಾಕುಲ ಗ್ರಾಮದ ಗ್ರಾಮ ಲೆಕ್ಕಿಗರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎ.ಜಿ.ಪತ್ರೇಕರ್ ಅವರು ಚಿತ್ತಕುಲ ಗ್ರಾಮದ ಸ.ನಂ.293/3ರ ಜಮೀನಿನ ಮಾಲೀಕತ್ವ ಕುರಿತು ಡಿಕ್ರಿಯಲ್ಲಿ ಹೆಸರು ಇ ಲ್ಲದಿರುವ ಡಾ.ಹುಮಾಯೂನ್ ಮಹಮದ್ ಷೇಖ್ ಅವರ ಹೆಸರನ್ನು ಎ-320ರ ಮ್ಯುಟೇಷನ್ ರಿಜಿಸ್ಟರ್‌ನಲ್ಲಿ ಎಂಟ್ರಿ ಮಾಡಿರುವುದನ್ನು ಪ್ರಮಾಣೀಕರಿಸುವ ಮತ್ತು ಅಂಗೀಕರಿಸುವ ಪೂರ್ವದಲ್ಲಿ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ನ್ಯಾಯಾಲಯದ ಡಿಕ್ರಿಯನ್ನು ಪರಿಶೀಲಿಸದೆ

ಹಾಗೂ ಸಂಬಂಧಪಟ್ಟ ಪಕ್ಷಕಾರರಿಗೆ ತಿಳುವಳಿಕೆ ನೀಡದೆ ವಿಚಾರಣೆ ಮಾಡದೆ, ಮ್ಯುಟೇಷನ್‌ನ್ನು ಪರಿಶೀಲಿಸದೆ ಅಂಗೀಕರಿಸಿರುವುದು ಅವರು ಎಸಗಿರುವ ದುರ್ನಡತೆಯಾಗಿದ್ದರೂ ಸಹ ದಾಖಲೆಗಳು ಹಾಗೂ ಸಾಕ್ಷಿಗಳ ಹೇಳಿಕೆಯ ಹಿನ್ನೆಲೆಯಲ್ಲಿ ಈ ಕೃತ್ಯವನ್ನು ಅವರು ಎಸಗಿರುವುದು ಕಂಡು ಬಂದಿರುವುದಿಲ್ಲ. ಗ್ರಾಮ ಲೆಕ್ಕಿಗರು ಈ ಮ್ಯುಟೇಷನ್ ಎಂಟ್ರಿಯನ್ನು ಕಂದಾಯ ನಿರೀಕ್ಷಕರಿಂದ ಅನುಮೋದನೆ ಪಡೆದು ನಮೂದಿಸಿರುತ್ತಾರೆ. ಇದನ್ನು ತಹಶೀಲ್ದಾರ್‌ರು ಅನುಮೋದನೆ ನೀಡಿರುವುದಿಲ್ಲ. Dispute ಇದ್ದಂತಹ ಪ್ರಕರಣಗಳಲ್ಲಿ ಗ್ರಾಮ ಲೆಕ್ಕಿಗರು ಕಂದಾಯ ನಿರೀಕ್ಷಕರ ಮೂಲಕ ತಹಶಿಲ್ದಾರ್‌ರಿಗೆ ಸಲ್ಲಿಸಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ತಹಶೀಲ್ದಾರ್‌ರವರು ಇತರೆ ಹಕ್ಕುದಾರರಿಗೆ ನೋಟೀಸ್ ನೀಡಿ ಪ್ರಕರಣವನ್ನು ಇತ್ಯರ್ಥಪಡಿಸುತ್ತಾರೆ. ಆದರೆ ಈ ಪ್ರಕರಣದಲ್ಲಿ ಗ್ರಾಮ ಲೆಕ್ಕಿಗರು ಭೂ ಬದಲಾವಣೆ, ಖಾತಾ ಬದಲಾವಣೆ ಮುಂತಾದ ಕೆಲಸಗಳನ್ನು ಕಂದಾಯ ನಿರೀಕ್ಷಕರ ಅನುಮೋದನೆಯ ಮೇರೆಗೆ ಮಾಡಿರುತ್ತಾರೆ. ಈ ಪ್ರಕರಣವನ್ನು ತಹಶೀಲ್ದಾರ್‌ರಿಗೆ ಕಳುಹಿಸಿರುವುದಿಲ್ಲ ಹಾಗೂ ಮ್ಯುಟೇಷನ್ ಎಂಟ್ರಿಯನ್ನು ಅನುಮೋದಿಸಿರುವುದಿಲ್ಲ. ಹೀಗಾಗಿ ಅವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುವುದಿಲ್ಲ.

ಶ್ರೀ ಎ.ಜಿ.ಪತ್ರೇಕರ್ ಅವರು ಚಿತ್ತಾಕುಲ ಗ್ರಾಮದ ಗ್ರಾಮ ಲೆಕ್ಕಿಗರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿತ್ತಾಕುಲ ಗ್ರಾಮದ ಸ.ನಂ.293/3ರ ಜಮೀನಿನ ಮಾಲೀಕತ್ವ ಕುರಿತು ಕೋರ್ಟ್ ಡಿಕ್ರಿಯಲ್ಲಿ ಹೆಸರು ಇಲ್ಲದಿರುವ ಡಾ.ಹುಮಾಯೂನ್ ಮಹಮದ್ ಷೇಖ್ ಅವರ ಹೆಸರನ್ನು ಎ-320ರ ಮ್ಯುಟೇಷನ್ ಎಂಟ್ರಿಯನ್ನು ಮಾಡಿರುತ್ತಾರೆ. ಈ ಎಂಟ್ರಿ ಮಾಡುವ ಮುನ್ನ ಸಂಬಂಧಪಟ್ಟ ಸಹೋದರರಿಗೆ ಯಾವುದೇ ತಿಳುವಳಿಕೆಯನ್ನು ನೀಡಿರುವುದಿಲ್ಲ ಮತ್ತು ಯಾವುದೇ ವಿಧಿವಿಧಾನಗಳನ್ನು ಅನುಸರಿಸದೆ ಅಕ್ರಮವಾಗಿ ಜಮೀನನ್ನು ಮ್ಯುಟೇಷನ್ ದಾಖಲೆಯಲ್ಲಿ ನಮೂದಿಸಿ ಅವರ ಹೆಸರಿಗೆ ಖಾತೆ ಮಾಡಿರುತ್ತಾರೆ. ಹಾಗೂ ಸದರಿ ಜಮೀನಿಗೆ ಸಂಬಂಧಿಸಿದಂತೆ ತಮ್ಮ ಸಂಬಂಧಿಕರುಗಳಿಗೆ ವಂಚಿಸಿ ಭೂಪರಿಹಾರ ಧನ ರೂ.66,433/-ಗಳನ್ನು ಪಡೆಯಲು ಅವಕಾಶ ಮಾಡಿಕೊಟ್ಟಿರುತ್ತಾರೆ. ಹಾಗೂ ಅವರು ತಮ್ಮ ರಕ್ಷಣಾ ಹೇಳಿಕೆಯಲ್ಲಿ ಪ್ರಸ್ತಾಪಿಸಿರುವುದನ್ನು ಸಾಬೀತುಗೊಳಿಸಲು ಯಾವುದೇ ದಾಖಲೆಗಳು ಲಭ್ಯವಿರುವುದಿಲ್ಲ. ಅವರು ಸದರಿ ವ್ಯಕ್ತಿಗೆ ಸಹಾಯ ಮಾಡುವ ಸಲುವಾಗಿ ಖೋಟಾ ದಾಖಲೆ ಸೃಷ್ಟಿಸಿರುವುದು ಕಂಡು ಬಂದಿರುವುದರಿಂದ ಅವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆಯೆಂದು ನಿರ್ಣಯ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರವರು ಮೇಲೆ (3)ರಲ್ಲಿ ಓದಲಾದ ದಿ:03.11.05ರ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ದಾಖಲೆಗಳನ್ನು ಸರ್ಕಾರಕ್ಕೆ ರವಾನಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (4)ರಲ್ಲಿ ಓದಲಾದ ದಿ:09.05.05ರ ನೋಟೀಸಿನೊಡನೆ ಆರೋಪ ಸಾಬೀತಾದ ಶ್ರೀ ಎ.ಜಿ.ಪತ್ರೇಕರ್ ಅವರಿಗೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸಿಗೆ ಶ್ರಿ ಎ.ಜಿ.ಪತ್ರೇಕರ್ ಅವರು ಮೇಲೆ (5)ರಲ್ಲಿ ಓದಲಾದ ದಿ:09.01.06ರ ಮನವಿಯಲ್ಲಿ ಉತ್ತರ ಸಲ್ಲಿಸಿ ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿಕೊಳ್ಳದೆ ತಮ್ಮನ್ನು ಆರೋಪಮುಕ್ತರನ್ನಾಗಿಸಲು ಕೋರಿದ್ದರಾದರೂ ಅವರ ಕೋರಿಕೆಗೆ ಯಾವುದೇ ಸಮರ್ಥನೆಯನ್ನು ನೀಡಿರುವುದಿಲ್ಲ ಹಾಗೂ ಈ ಪ್ರಕ್ರಿಯೆ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಪರಿಚ್ಛೇಧ 130(6) ಅಡಿಯಲ್ಲಿ ಹಾಗೂ ಕರ್ನಾಟಕ ಭೂ ಕಂದಾಯ ನಿಯಮಾವಳಿ 1966ರ ನಿಯಮ 65ರಡಿಯಲ್ಲಿ ಕಾನೂನಿನಂತೆ ನಡೆದಿದ್ದು, ಪರಿಹಾರ ಧನ ಬಿಡುಗಡೆ ಮಾಡುವ ಪೂರ್ವದಲ್ಲಿ Indemnity bond ಅನ್ನು ಡಾ.ಹುಮಾಯೂನ್ ಮಹಮದ್ ಷೇಖ್ ಅವರಿಂದ ಬರೆಯಿಸಿಕೊಳ್ಳಲಾಗಿದೆಯೆಂದು ತಿಳಿಸಿರುತ್ತಾರೆ. ಅವರ ವಾದವನ್ನು ಈಗಾಗಲೇ ವಿಚಾರಣೆ ಸಮಯದಲ್ಲಿ ಪರಿಶೀಲಿಸಲಾಗಿದ್ದು, ಅವು ಸ್ವೀಕಾರಾರ್ಹವಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಅವರ ಉತ್ತರವು ಯಾವುದೇ ಹೊಸ ಅಂಶಗಳಿಂದ ಕೂಡಿರುವುದಿಲ್ಲ. ನ್ಯಾಯಾಲಯದ ಡಿಕ್ರಿಗೆ ವ್ಯತಿರಿಕ್ತವಾಗಿ ಸದರಿ ಜಮೀನು ಡಾ.ಹುಮಾಯೂನ್ ಅವರಿಗೆ ಸೇರದೇ ಇದ್ದಾಗಲೂ ಸೇರಿದೆಯೆಂದು ಇತರೆ ಹಕ್ಕುದಾರರಿಗೆ ಈ ಬಗ್ಗೆ ತಿಳುವಳಿಕೆಯನ್ನು ನೀಡದೇ ಅಕ್ರಮವಾಗಿ ಖಾತೆ ನೀಡಿದ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ಶ್ರೀ ಹೆಚ್.ಎನ್.ಹನುಮಂತಯ್ಯ, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ಆರೋಪಮುಕ್ತರನ್ನಾಗಿಸಲು ಮತ್ತು ಶ್ರೀ ಎ.ಜಿ.ಪತ್ರೇಕರ್, ಗ್ರಾಮ ಲೆಕ್ಕಿಗ ಅವರಿಗೆ ದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 110 ಎಸ್‌ಇ ಎನ್ 02 ಬೆಂಗಳೂರು ದಿನಾಂಕ:5ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಪ್ರಕರಣದ ಆರೋಪಿಗಳಿಗೆ ಸಂಬಂಧಿಸಿದಂತೆ ಈ ಮುಂದಿನಂತೆ ಆದೇಶಿಸುತ್ತದೆ.

1) ಶ್ರೀ ಹೆಚ್.ಎನ್.ಹನುಮಂತಯ್ಯ, ನಿವೃತ್ತ ಕೆಎಎಸ್ ಅಧಿಕಾರಿ ಅವರನ್ನು ಸಮಸಂಖ್ಯೆಯ ದಿನಾಂಕ:11.10.02ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ. ಹಾಗೂ

2) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎ.ಜಿ.ಪತ್ರೇಕರ್, ಗ್ರಾಮ ಲೆಕ್ಕಿಗರು ಅವರ ಮುಂದಿನ 2 (ಎರಡು) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಹೆಚ್.ಎನ್.ಹನುಮಂತಯ್ಯ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 917

**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಇ ವರ ವಿರುದ್ಧ ಇ ಲಾಖಾ ವಿಚಾರಣೆ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 148 ಎಸ್‌ಇ ಎನ್ 04 ಬೆಂಗಳೂರು ದಿನಾಂಕ:12ನೇ ಜೂನ್ 2006.**

ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಹಾವೇರಿ ಉಪ ವಿಭಾಗಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬ್ಯಾಡಗಿ ತಾಲ್ಲೂಕು ಶಿಡೆನೂರು ಗ್ರಾಮದ ರಿ.ಸ.ನಂ.408/1+2ಬಿ ರಲ್ಲಿನ ಜಮೀನೊಂದರಲ್ಲಿನ ಕೊಳವೆ ಬಾವಿಗೆ ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿ ವಿದ್ಯುತ್ ಸಂಪರ್ಕ ಪರವಾನಗಿ ನೀಡಿರುವುದು ಹಾಗೂ ಹಾವೇರಿ ಪುರ ಸಭೆಯ ವ್ಯಾಪ್ತಿಯ ಶಾಲೆಗಳ ಸ್ಕೂಲ್ ಬ್ಯಾಗ್ ಖರೀದಿಯಲ್ಲಿ ನಡೆದ ಅವ್ಯವಹಾರದ ಸಂಬಂಧ ಸ್ಥಳ ತನಿಖೆ ಮಾಡದೇ ಮೇಲಾಧಿಕಾರಿಗಳ ಸೂಚನೆಗಳನ್ನು ಉಲ್ಲಂಘಿಸಿ ಸುಳ್ಳು ವರದಿ ನೀಡುವುದರ ಮೂಲಕ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಳಿಗಾಗಿ ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇ ಲಾಖಾ ವಿಚಾರಣೆ ಪ್ರಾರಂಭಿಸಬೇಕಾಗಿ ಸರ್ಕಾರ ಭಾವಿಸಿದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಹೆಚ್.ಪೂಜಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇ ಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 919

**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3).

**ವಿಷಯ:** ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 97, ದಿನಾಂಕ: 17.6.1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2002, ದಿನಾಂಕ: 1.6.2002 ಹಾಗೂ ಸೇರ್ಪಡೆ ಆದೇಶ ದಿನಾಂಕ: 21.6.2002.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2004, ದಿನಾಂಕ: 19.11.2004.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2005, ದಿನಾಂಕ: 14.6.2005.
5. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ: ಕಾಇ 44 ಸಿಎಲ್‌ಸಿ 2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 17.6.1997ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಬಾಲ ಕಾರ್ಮಿಕರ ಕಲ್ಯಾಣಕ್ಕಾಗಿ ಒಂದು ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದ್ದಿತು.

| | |
|---|---|
| 1. ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. ಸಹಾಯಕರು | 2 ಹುದ್ದೆಗಳು |
| 4. ಶೀಘ್ರಲಿಪಿಗಾರರು | 1 ಹುದ್ದೆ |
| 5. ವಾಹನ ಚಾಲಕರು | 1 ಹುದ್ದೆ |
| 5. ಗ್ರೂಪ್ ^ಡಿ^ | 2 ಹುದ್ದೆಗಳು |

ಈ ಹುದ್ದೆಗಳನ್ನು ಸರ್ಕಾರದ ವಿವಿಧ ಆದೇಶಗಳಲ್ಲಿ ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿರುತ್ತದೆ. ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 1.6.2002ರ ಆದೇಶ ಹಾಗೂ 21.6.2002ರ ಸೇರ್ಪಡೆ ಆದೇಶದಲ್ಲಿ ಈ ಹುದ್ದೆಗಳ ಪೈಕಿ ಒಂದು ದಲಾಯತ್ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ. ಪ್ರಧಾನ ಕಾರ್ಯದರ್ಶಿ ಕಾರ್ಮಿಕ ಇಲಾಖೆ ಇವರು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಾಲ ಕಾರ್ಮಿಕ ಕೋಶದ ವಿಶೇಷಾಧಿಕಾರಿ ಮತ್ತು ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) ಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಹುದ್ದೆಗಳೆಂದು ಪರಿಗಣಿಸಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಬಾಲ ಕಾರ್ಮಿಕ ಕೋಶವನ್ನು ದಿನಾಂಕ: 18.6.2005 ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (5)ರ ಕಡತದಲ್ಲಿ ಸದರಿ ಬಾಲ ಕಾರ್ಮಿಕ ಕೋಶವನ್ನು ದಿನಾಂಕ: 18.6.2006 ರಿಂದ ಮುಂದುವರೆಸುವ ಅವಶ್ಯಕತೆ ಇರುವುದರಿಂದ ಈ ಕೋಶವನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಒಂದು ವರ್ಷದ ಅವಧಿಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 2006, ಬೆಂಗಳೂರು, ದಿನಾಂಕ: 8ನೇ ಜೂನ್ 2006.**

ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ: 18.6.2006 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | |
|---|---|
| 1. ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 2. ಉಪ ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 ಹುದ್ದೆ |
| 3. ಸಹಾಯಕರು | 2 ಹುದ್ದೆಗಳು |
| 4. ಶೀಘ್ರಲಿಪಿಗಾರರು | 1 ಹುದ್ದೆ |
| 4. ವಾಹನ ಚಾಲಕರು | 1 ಹುದ್ದೆ |
| 5. ಗ್ರೂಪ್ ^ಡಿ^ | 1 ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಯು.ಪಿ.ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು–2).

ಪಿ.ಆರ್. 948

**ವಿಷಯ:** ಶ್ರೀ ಬಿ.ಹೆಚ್.ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** ಅಪರ ಆರಕ್ಷಕ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರದ ಕ್ರಮಾಂಕ:ಎಲ್‌ಓಕೆ / ಐಎನ್‌ವಿ(ಜಿ) / ಸಿಟಿಎಲ್-12 / ಸಿಆರ್-12 / 2005 / ಸಿಟಿಎ ದಿನಾಂಕ: 30.11.2005.

**ಪ್ರಸ್ತಾವನೆ:**

ಶ್ರೀ ಬಿ.ಹೆಚ್.ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರು ಹಾವೇರಿ ಜಿಲ್ಲೆಯ ಹಾವೇರಿ ಉಪ ವಿಭಾಗದ ಉಪ ವಿಭಾಗಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಅಧಿಕ ಸ್ಥಿರ ಮತ್ತು ಚರಾಸ್ತಿಗಳನ್ನು ಹೊಂದಿರುತ್ತಾರೆ ಎಂಬ ಮಾಹಿತಿಯ ಆಧಾರದ ಮೇಲೆ ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು ಅವರ ವಿರುದ್ಧ 1988ರ ಲಂಚ ನಿರ್ಮೂಲನಾ ಕಾಯ್ದೆ ಕಲಂ 13(1)(ಇ ) ಸಹವಾಚನ 13(2)ರ ಪ್ರಕಾರ ದಿ:14.11.2005 ರಂದು ಪ್ರಕರಣ ದಾಖಲು ಮಾಡಿಕೊಂಡು ಅದರನ್ವಯ ದಿ:15.11.2005 ರಂದು ಅವರ ಮನೆ ಮತ್ತು ಕಛೇರಿಯ ಮೇಲೆ ಶೋಧನೆ ಮಾಡಿ ಈ ಸಂಬಂಧ ಪ್ರಾಥಮಿಕ ತನಿಖೆ ನಡೆಸಿ ಅದರಲ್ಲಿ ಸದರಿ ಅಧಿಕಾರಿಯು ತಮ್ಮ ಬಲ್ಲ ಮೂಲಗಳ ಆದಾಯ ರೂ.25.00 ಲಕ್ಷಕ್ಕಿಂತ ರೂ.81,75,680/- ಗಳಷ್ಟು ಸ್ಥಿರ ಮತ್ತು ಚರಾಸ್ತಿಯನ್ನು ಹೊಂದಿರುವುದು ದೃಢಪಟ್ಟ ಹಿನ್ನೆಲೆಯಲ್ಲಿ, ಅವರನ್ನು ಸೇವೆಯಲ್ಲಿ ಮುಂದುವರೆಸುವುದರಿಂದ ಮುಂದಿನ ತನಿಖೆಗೆ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಅಮಾನತ್ತಿನಲ್ಲಿರಿಸುವಂತೆ ಅಪರ ಆರಕ್ಷಕ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ ಓದಲಾದ ದಿ:30.11.2005ರ ಪತ್ರದಲ್ಲಿ ಕೋರಿರುತ್ತಾರೆ. ಸದರಿ ಪತ್ರದಲ್ಲಿನ ಅಂಶಗಳನ್ನು/ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 160 ಎಸ್‌ಇ ಎನ್ 05 ಬೆಂಗಳೂರು ದಿನಾಂಕ:15ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಹೆಚ್.ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (ನೇಮಕಾತಿ ನಿರೀಕ್ಷೆಯಲ್ಲಿ) ಯವರನ್ನು ಅವರ ವಿರುದ್ಧ ತನಿಖೆ/ಶಿಸ್ತು ಕ್ರಮವನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಈ ಮೂಲಕ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ.ಹೆಚ್.ಸಿದ್ದಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಶ್ರೀ ಬಿ.ಹೆಚ್.ಸಿದ್ದಪ್ಪ ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 949

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಅಧೀನ ಕಾರ್ಯದರ್ಶಿ (ನಬಾರ್ಡ್) ಹುದ್ದೆಯನ್ನು ವಿಶೇಷಾಧಿಕಾರಿ ಹುದ್ದೆಯೆಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 97, ದಿನಾಂಕ: 4.7.1997.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 53 ಸಸಿವಿ 2005, ದಿ: 27.8.2005.
3. ಕಡತ ಸಂಖ್ಯೆ: ಲೋಇ 31 ಸ್ವೀಮರ 2006.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿ ತಾಂತ್ರಿಕ ವಿಷಯಗಳನ್ನು ನಿರ್ವಹಿಸಲು ಅನುಕೂಲವಾಗುವಂತೆ ಸಹ ಕಾರ್ಯದರ್ಶಿ ಹುದ್ದೆಯೊಂದನ್ನು ಕೆಳಕಂಡ ತಾಂತ್ರಿಕ ಸಿಬ್ಬಂದಿ ವರ್ಗದೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ, ಹಾಗೂ ಈ ಹುದ್ದೆಯು ಅಸ್ತಿತ್ವದಲ್ಲಿರುವವರೆಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ಉತ್ತರ) ಧಾರವಾಡ ಇವರ ಅಧೀನದಲ್ಲಿರುವ ಅಧೀಕ್ಷಕ ಅಭಿಯಂತರರು (ವಿನ್ಯಾಸ) ಹುದ್ದೆ ಹಾಗೂ ಮುಖ್ಯ ಅಭಿಯಂತರರು (ಸಂಪರ್ಕ ಮತ್ತು ಕಟ್ಟಡ) (ದಕ್ಷಿಣ) ಬೆಂಗಳೂರು ಹುದ್ದೆ ಹಾಗೂ ಮುಖ್ಯ ಅಭಿಯಂತರರು ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಇಲ್ಲಿನ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳು ಇವುಗಳನ್ನು ತುಂಬದೆ ನಿಲಂಬನೆಯಲ್ಲಿಡಲು ಆದೇಶಿಸಲಾಗಿದೆ. ಸಹ ಕಾರ್ಯದರ್ಶಿ ಹುದ್ದೆಯನ್ನು ಹಾಗೂ ತಾಂತ್ರಿಕ ಸಿಬ್ಬಂದಿ ವರ್ಗದ ಹುದ್ದೆಗಳನ್ನು ಪುನರ್ ಅಭಿ ನಿಯೋಜನೆಯ ಮೂಲಕ ಭರ್ತಿ ಮಾಡಲು ಸಹ ಸದರಿ ಆದೇಶದಲ್ಲಿ ತಿಳಿಸಲಾಗಿದೆ.

| | |
|---|---|
| ಅ. ಅಧೀನ ಕಾರ್ಯದರ್ಶಿ (ಸಹಾಯಕ ಕಾರ್ಯಪಾಲಕ ಅಭಿಯಂತರರು). | – 2 ಹುದ್ದೆಗಳು |
| ಆ. ಸಹಾಯಕ ಅಭಿಯಂತರರು | – 4 ಹುದ್ದೆಗಳು |
| ಇ. ಕಿರಿಯ ಅಭಿಯಂತರರು | – 2 ಹುದ್ದೆಗಳು |
| ಈ. ಕಿರಿಯ ಸಹಾಯಕ : ದ್ವಿತೀಯ ದರ್ಜೆ ಸಹಾಯಕ | – 2 ಹುದ್ದೆಗಳು |
| ಉ. ಬೆರಳಚ್ಚುಗಾರರು | – 2 ಹುದ್ದೆಗಳು |
| ಊ. ದಲಾಯತ್ | – 2 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 27.8.2005ರ ಆದೇಶದಲ್ಲಿ ಅಧೀನ ಕಾರ್ಯದರ್ಶಿ ಹುದ್ದೆಗಳನ್ನು ಆಡಳಿತದ ದೃಷ್ಟಿಯಿಂದ ಇ.ಎ.ಪಿ. ಮತ್ತು ನಬಾರ್ಡ್ ಎಂದು ನಾಮಾಂಕಿತಗೊಳಿಸಿ ದಿನಾಂಕ: 3.7.2006 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾಗಿರುವ ಕಡತದಲ್ಲಿ ಲೋಕೋಪಯೋಗಿ ಇಲಾಖೆಯ ಅಧೀನ ಕಾರ್ಯದರ್ಶಿ (ನಬಾರ್ಡ್) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಆರ್. ಮಂಜುಳಾ ರವರಿಗೆ ಕಾರ್ಯಪಾಲಕ ಇಂಜನಿಯರ್ ಹುದ್ದೆಗೆ ಮುಂಬಡ್ತಿ ನೀಡಲಿರುವುದರಿಂದ ಅವರು ಆ ಹುದ್ದೆಯ ಕಾರ್ಯಭಾರವನ್ನು

ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಅಧೀನ ಕಾರ್ಯದರ್ಶಿ ಹುದ್ದೆಯನ್ನು ವಿಶೇಷಾಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 35 ಸಸಿವಿ 2006, ಬೆಂಗಳೂರು, ದಿನಾಂಕಃ 8ನೇ ಜೂನ್ 2006.**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಲೋಕೋಪಯೋಗಿ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಧೀನ ಕಾರ್ಯದರ್ಶಿ (ನಬಾರ್ಡ್) ಹುದ್ದೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ ಶ್ರೀಮತಿ ಅರ್.ಮಂಜುಳಾ, ಸಹಾಯಕ ಕಾರ್ಯಪಾಲಕ ಇಂಜನಿಯರ್ ಅವರು ಕಾರ್ಯಪಾಲಕ ಇಂಜನಿಯರ್ ಹುದ್ದೆಗೆ ಪದೋನ್ನತಿ ಹೊಂದಿ ಆ ಹುದ್ದೆಯಲ್ಲಿ ಕಾರ್ಯಭಾರವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ವಿಶೇಷಾಧಿಕಾರಿ ಹುದ್ದೆಯನ್ನು ಸೃಜಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆಃ ಆಇ 846 ವೆಚ್ಚ–5/2006, ದಿನಾಂಕಃ 30.5.2006ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಯು.ಪಿ.ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು–2).

ಪಿ.ಆರ್. 918

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ^ಚುನಾವಣಾ ವಿಭಾಗದಲ್ಲಿನ^ ತಾತ್ಕಾಲಿಕವಾಗಿ ಉನ್ನತೀಕರಿಸಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಸಿವಿ 2004, ದಿ: 23.12.04.

2. ಅ.ಸ.ಪತ್ರ ಸಂಖ್ಯೆ: ಸಿಆಸುಇ 68 ಚುಸಿಆ 2003, ದಿ: 22.3.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಚುನಾವಣಾ ವಿಭಾಗದಲ್ಲಿ ಅಸ್ತಿತ್ವದಲ್ಲಿರುವ ಜೂನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೀನಿಯರ್ ಪ್ರೋಗ್ರಾಮರ್ ಹುದ್ದೆ ಎಂದು ಉನ್ನತೀಕರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಅರೆ ಸರ್ಕಾರಿ ಪತ್ರದಲ್ಲಿ ಉನ್ನತೀಕರಿಸಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು 2 ವರ್ಷಗಳ ಅವಧಿಗೆ ಮುಂದುವರೆಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2006, ಬೆಂಗಳೂರು, ದಿನಾಂಕ: 7ನೇ ಜೂನ್ 2006.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ ಚುನಾವಣಾ ವಿಭಾಗದಲ್ಲಿ ತಾತ್ಕಾಲಿಕವಾಗಿ ಉನ್ನತೀಕರಿಸಿರುವ ಸೀನಿಯರ್ ಪ್ರೋಗ್ರಾಮರ್ ಹುದ್ದೆಯನ್ನು ದಿನಾಂಕ: 23.5.2006 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆಃ ಆಇ 716 ವೆಚ್ಚ–5/2006, ದಿನಾಂಕ: 22.5.2006ರಲ್ಲಿ ಅನುಮತಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಯು.ಪಿ.ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು–2).

ಪಿ.ಆರ್. 895

**ವಿಷಯ:** ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್ ^ಬಿ^ ಹುದ್ದೆಯನ್ನು ಗ್ರೂಪ್ ^ಎ^ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಟಿಪ್ಪಣಿ ಸಂಖ್ಯೆ: ಉಪಮು/ಆಪ್ತ ಸಿ/021/2006, ದಿನಾಂಕ: 15.2.2006.

2. ಟಿಪ್ಪಣಿ ಸಂಖ್ಯೆ: ಉಪಮು/ಸಾಸ/125/2006, ದಿನಾಂಕ: 22.2.2006.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಸಅಸೇ 2006 (ಭಾಗ), ಬೆಂಗಳೂರು, ದಿನಾಂಕ: 30ನೇ ಮೇ 2006.**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಮಾನ್ಯ ಉಪ ಮುಖ್ಯ ಮಂತ್ರಿಯವರ ಆಪ್ತ ಶಾಖೆಗೆ ಶ್ರೀ ಎನ್.ಭೃಂಗೀಶ್, ಜಂಟಿ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಅವರನ್ನು ಪತ್ರಿಕಾ ಕಾರ್ಯದರ್ಶಿಯಾಗಿ

ನೇಮಿಸುವಂತೆ ಕೋರಲಾಗಿದೆ. ಮಾನ್ಯ ಉಪ ಮುಖ್ಯ ಮಂತ್ರಿಯವರ ಆಪ್ತ ಶಾಖೆಗೆ ಅಧಿಕಾರಿಯವರನ್ನು ನೇಮಿಸಲು ಗ್ರೂಪ್ ^ಎ^ ಹುದ್ದೆ ಖಾಲಿ ಇಲ್ಲದಿರುವುದರಿಂದ ಅಧಿಕಾರಿಯವರು ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಕಾರ್ಯಭಾರ ವಹಿಸಿಕೊಂಡ ದಿನಾಂಕ: 15.2.2006 ರಿಂದ ಜಾರಿಗೆ ಬರುವಂತೆ ಹಾಗೂ ಉಪ ಮುಖ್ಯ ಮಂತ್ರಿಯವರ ಪದಾವಧಿಯವರೆಗೆ ಅಥವಾ ಶ್ರೀ ಎನ್.ಭೃಂಗೀಶ್ ರವರ ಸೇವೆಯನ್ನು ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಅವಶ್ಯವಿರುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಉಪ ಮುಖ್ಯ ಮಂತ್ರಿಯವರ ಆಪ್ತ ಶಾಖೆಯಲ್ಲಿನ ಒಂದು ಗ್ರೂಪ್ ^ಬಿ^ ಹುದ್ದೆಯನ್ನು ಗ್ರೂಪ್ ^ಎ^ ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 561 ವೆಚ್ಚ-5/2006, ದಿನಾಂಕ: 25.4.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ
**ಯು.ಪಿ.ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು-2).

ಪಿ.ಆರ್. 860

**ವಿಷಯ:** ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು) ವಿಭಾಗದ ಸಂಶೋಧನಾ ಶಾಖೆಯ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 854 ಎಸ್‌ಜಿಒ 82 ದಿನಾಂಕಃ 13.2.1983 ಮತ್ತು 18.6.1984.
2. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 56 ಸಸಿವಿ 99 ದಿನಾಂಕಃ 27.1.2000.
3. ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 18 ಸಸಿವಿ 2001 ದಿನಾಂಕಃ 14.8.2001.
4. ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 6 ಸಸಿವಿ 2002 ದಿನಾಂಕಃ 8.5.2002.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 82 ಸಸಿವಿ 2004 ದಿನಾಂಕ: 4.3.2005.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಸಸಿವಿ 2005 ದಿನಾಂಕ: 26.12.2005.
7. ಕಡತ ಸಂಖ್ಯೆ: ಎಫ್‌ಡಿ 1 ಎಂಐಎಫ್ 2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಾಂಸ್ಥಿಕ ಹಣಕಾಸು ಮತ್ತು ಸಾಂಖ್ಯಿಕ ಇಲಾಖೆಯ ಸಂಶೋಧನಾ ಇಲಾಖೆಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| | | |
|---|---|---|
| 1. | ವಿಶೇಷಾಧಿಕಾರಿ (ಬ್ಯಾಂಕಿಂಗ್) | 1 ಹುದ್ದೆ |
| 2. | ಹಿರಿಯ ಸಾಂಖ್ಯಿಕ ಸಹಾಯಕ | 3 ಹುದ್ದೆಗಳು |
| 3. | ಶೀಘ್ರಲಿಪಿಗಾರರು | 1 ಹುದ್ದೆ |
| 4. | ಬೆರಳಚ್ಚುಗಾರರು | 2 ಹುದ್ದೆಗಳು |
| 5. | ದಲಾಯತ್ | 2 ಹುದ್ದೆಗಳು |

ಮೇಲ್ಕಂಡ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಕ್ರಮ ಸಂಖ್ಯೆ (2)ರ ಓದಲಾದ ಸರ್ಕಾರಿ ಆದೇಶದಲ್ಲಿ ಹಿರಿಯ ಸಾಂಖ್ಯಿಕ ಸಹಾಯಕ ದರ್ಜೆಯ ಮೂರು ಹುದ್ದೆಗಳನ್ನು ಸಹಾಯಕ ಸಾಂಖ್ಯಿಕ ಅಧಿಕಾರಿ ದರ್ಜೆಗೆ ನಿಮ್ನೀಕರಿಸಿರುವುದರೊಂದಿಗೆ ಎಲ್ಲಾ ಹುದ್ದೆಗಳನ್ನು ಮುಂದುವರೆಸಿಕೊಂಡು ಬರಲಾಗಿದೆ.

ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಾಂಸ್ಥಿಕ ಹಣಕಾಸು ಇಲಾಖೆಯನ್ನು ಆರ್ಥಿಕ ಇಲಾಖೆಯೊಡನೆ ವಿಲೀನಗೊಳಿಸಲಾಗಿದೆ ತದನಂತರ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎರಡು ಸಹಾಯಕ ಸಾಂಖ್ಯಿಕ ಅಧಿಕಾರಿ, ಒಂದು ಬೆರಳಚ್ಚುಗಾರರ ಹುದ್ದೆ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ದಿನಾಂಕ: 31.05.2002ರ ಅವಧಿಗೆ ಮಾತ್ರ ಮುಂದುವರೆಸಿ ದಿನಾಂಕ: 1-6-2002ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಹಾಗೂ ಇನ್ನುಳಿದ ಹುದ್ದೆಗಳನ್ನು ಕಾಲ ಕಾಲಕ್ಕೆ ಮುಂದುವರಿಸಿಕೊಂಡು ಬಂದಿದ್ದು ಕೊನೆಯದಾಗಿ ಕ್ರಮ ಸಂಖ್ಯೆ:[6]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿಸಿದ ಅವಧಿಯು ದಿನಾಂಕ: 1.1.2006 ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾಗಿರುವ ಕಡತ ಸಂಖ್ಯೆ: ಎಫ್‌ಡಿ 1 ಎಂಐಎಫ್ 2005 ರಲ್ಲಿ ಆರ್ಥಿಕ ಇಲಾಖೆಯು ಸಾಂಸ್ಥಿಕ ಹಣಕಾಸು ವಿಭಾಗದ ಸಂಶೋಧನ ಶಾಖೆಯ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಲು ಪ್ರಸ್ತಾಪಿಸಿರುತ್ತದೆ.

ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 3 ಸಸಿವಿ 2006, ಬೆಂಗಳೂರು, ದಿನಾಂಕಃ 7ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ, ಆರ್ಥಿಕ ಇಲಾಖೆಯ (ಸಾಂಸ್ಥಿಕ ಹಣಕಾಸು ವಿಭಾಗದ) ಸಂಶೋಧನಾ ಶಾಖೆಯ ಕೆಳಕಂಡ ಹುದ್ದೆಗಳನ್ನು ಖಾಯಂಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ (ಬ್ಯಾಂಕಿಂಗ್) | ಒಂದು |
| 2. | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು |
| 3. | ಶೀಘ್ರಲಿಪಿಗಾರ | ಒಂದು |
| 4. | ಬೆರಳಚ್ಚುಗಾರರು | ಒಂದು |
| 5. | ದಲಾಯತ್ | ಒಂದು |

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕಃ 23.5.2006ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 133 ವೆಚ್ಚ-5, 2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 894

**ಯು.ಪಿ.ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು-2).

**ಆರ್ಥಿಕ ಸಚಿವಾಲಯ**

**ವಿಷಯ:** ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ ಅವರ ಪತ್ರ ಸಂಖ್ಯೆ: ಸಉಸಿ(2)18/2001-02 ದಿನಾಂಕ:03.12.2005.

**ಪ್ರಸ್ತಾವನೆ:-**

ಭಾರತ ಸರ್ಕಾರದ ಹೊಸ ಆರ್ಥಿಕ ನೀತಿಯಂತೆ, 1990-91ನೇ ಆರ್ಥಿಕ ವರ್ಷದಲ್ಲಿ ಸಾಲಗಳ ಮೇಲಿನ ಬಡ್ಡಿದರ, ಮುಂಗಡ ಹಾಗೂ ಠೇವಣಿಗಳು ಮಾರುಕಟ್ಟೆಯಲ್ಲಿನ ಬೇಡಿಕೆ ಹಾಗೂ ಪೂರೈಕೆಯ (ಒತ್ತಡ) ಆಧಾರದ ಮೇಲೆ ನಿರ್ಧಾರಿತಗೊಳ್ಳುತ್ತವೆ. ಪ್ರಸ್ತುತಬಂಡವಾಳ ಮಾರುಕಟ್ಟೆಯಲ್ಲಿ ಚಾಲ್ತಿಯಲ್ಲಿರುವ ಬಡ್ಡಿದರ ಸುಮಾರು ಶೇಕಡ 5.5ರಷ್ಟಿರುತ್ತದೆ, ಆದರೆ ಸಣ್ಣ ಉಳಿತಾಯ ಹೂಡಿಕೆಗಳ ಮೇಲೆ ನೀಡಲು ಪ್ರಸ್ತಾವಿಸಲಾಗಿರುವ / ನೀಡುತ್ತಿರುವ ಬಡ್ಡಿದರ ಶೇಕಡ 8ರಷ್ಟು ಆಗಿರುತ್ತದೆ. ಹೀಗಾಗಿ ಇತ್ತೀಚಿನ ದಿನಗಳಲ್ಲಿ ಬಹುತೇಕ ಠೇವಣಿ ಹೂಡಿಕೆದಾರರು ತಮ್ಮ ಹೂಡಿಕೆಗಾಗಿ ಸಣ್ಣ ಉಳಿತಾಯವನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಸಣ್ಣ ಉಳಿತಾಯ ಸಂಗ್ರಹಣೆಗೆ ಇದರಿಂದ ಹೆಚ್ಚಿನ ಒತ್ತು ನೀಡಿದಂತಾಗಿದೆ. ಸಣ್ಣ ಉಳಿತಾಯ ಸಂಗ್ರಹಣೆಯ ಆಧಾರದ ಮೇಲೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರವು ಸಾಲವನ್ನು ಅಧ್ಯಾದೇಶೀಯ (Mandatory) ವಾಗಿ ಪಡೆಯಬೇಕಾಗಿದೆ. ಇದರಿಂದ ಬಂಡವಾಳ ಹೂಡಿಕೆಯು ಮಾರುಕಟ್ಟೆಯಲ್ಲಿನ ನಿಧಿ (ಫಂಡ್) ಬೆಲೆಗೆ ಹೋಲಿಸಿದಾಗ ಅತ್ಯಂತ ತುಟ್ಟಿಯಾಗಿರುವುದು ಕಂಡು ಬರುತ್ತದೆ. ಆದ್ದರಿಂದ, ಸಣ್ಣ ಉಳಿತಾಯದ ಮೂಲಕ ಠೇವಣಿಗಳನ್ನು ಪ್ರತಿಬಂಧಿಸುವಲ್ಲಿ ಯಾಂತ್ರಿಕತೆಯನ್ನು ಅಳವಡಿಸಿಕೊಳ್ಳುವ ತ್ವರಿತ ಅವಶ್ಯಕತೆ ಇರುವುದು ಕಂಡು ಬರುತ್ತದೆ. ಆದ್ದರಿಂದ, ಸರ್ಕಾರವು ಈ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸಲು ಸಣ್ಣ ಉಳಿತಾಯ ಸಂಗ್ರಹಣೆಗೆ ಗುರಿ ನಿಗಧಿಪಡಿಸದಿರಲು ನಿರ್ಧರಿಸಿದೆ. ಸರ್ಕಾರದ ಇತರ ಇಲಾಖೆಗಳಿಂದ, ನಗರ ಸ್ಥಳೀಯ ಪ್ರಾಧಿಕಾರಗಳಿಂದ ಪರವಾನಗಿಯನ್ನು ನೀಡುವ ಅಥವಾ ಪರವಾನಗಿ ತೀರುವಳಿ ಸಮಯದಲ್ಲಿ ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಖರೀದಿಸಲು ಷರತ್ತನ್ನು ವಿಧಿಸಬಾರದೆಂದು ಈಗಾಗಲೇ ನಿರ್ದೇಶನ ಕೊಡಲಾಗಿದೆ. ಇಲಾಖೆಯು ಇನ್ನು ಮುಂದೆ ಹೊಸದಾಗಿ ಸಣ್ಣ ಉಳಿತಾಯ ಏಜಂಟರುಗಳ ನೇಮಕಾತಿ ಮಾಡಿಕೊಳ್ಳಬಾರದೆಂದು ಕೂಡ ನಿರ್ದೇಶಿಸಲ್ಪಟ್ಟಿದೆ. ಪರಿಣಾಮವಾಗಿ ಇಲಾಖೆಯಲ್ಲಿ ಕೆಲಸದ ಒತ್ತಡ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗಿರುತ್ತದೆ. ಆದ್ದರಿಂದ ಇಲಾಖೆಯಲ್ಲಿ ಲಭ್ಯವಿರುವ ಅಧಿಕ ಮಾನವ ಸಂಪನ್ಮೂಲ ಹಾಗೂ ಮೂಲಭೂತ ಸೌಕರ್ಯಗಳನ್ನು ಉತ್ತಮ ಕಾರ್ಯಗಳಿಗಾಗಿ ಬಳಸಿಕೊಳ್ಳಬೇಕಾದ ಅನಿವಾರ್ಯತೆ ಇರುತ್ತದೆ.

ಸರ್ಕಾರವು, ಈ ಹಿಂದೆ ಸರ್ಕಾರದ ಸ್ವಾಮ್ಯಕ್ಕೊಳಪಟ್ಟ ನಿಗಮ, ಮಂಡಳಿ ಹಾಗೂ ಕಾರ್ಪೋರೇಷನ್‌ಗಳಲ್ಲಿ ಸಾಕಷ್ಟು ಹೂಡಿಕೆ ಮಾಡಿರುತ್ತದೆ. ಜೊತೆಗೆ ಸರ್ಕಾರವು ಅನೇಕ ಮಂಡಳಿ ಹಾಗೂ ಕಾರ್ಪೋರೇಷನ್‌ಗಳು ಸಾಲ ಪಡೆಯಲು ಗ್ಯಾರಂಟಿಯನ್ನು ನೀಡಿರುತ್ತದೆ. ರೋಗಗ್ರಸ್ಥ ಸಕ್ಕರೆ ಕಾರ್ಖಾನೆಗಳನ್ನು ಪುನರುಜ್ಜೀವನಗೊಳಿಸಲು ಹಾಗೂ ಪುನರ್ ಸ್ಥಾಪಿಸುವ ಸಲುವಾಗಿ, ಸರ್ಕಾರವು ಮುಂದೂಡುವ (ಡಿಫರ್‌ಮೆಂಟ್) ಆಧಾರದ ಮೇಲೆ ಕಬ್ಬುಗಳ ಖರೀದಿಗೆ ನೆರವು ನೀಡಲಾಗಿರುತ್ತದೆ. ಒಂದು ಘಟಕದಿಂದ ಮತ್ತೊಂದು ಘಟಕ್ಕೆ ಎಂದರೆ, ಪುನರ್ ಸ್ಥಾಪನೆಗಾಗಿ ಬಿ.ಐ.ಎಫ್.ಆರ್. ಮತ್ತು ಎ.ಎ.ಐ.ಎಫ್.ಆರ್.ಗಳ ಮುಂದೆ ಪರಿಹಾರ ಕೋರಿರುವ ಕೈಗಾರಿಕಾ ಸಂಸ್ಥೆಗಳಿಗೆ ಪರಿಹಾರ ಮತ್ತು ವಿನಾಯಿತಿಗಳನ್ನು ನೀಡಲಾಗಿದೆ. ಅಲ್ಲದೆ, ಸರ್ಕಾರವು ಈ ಹಿಂದೆ ಪಿ.ಎಸ್.ಯು. ಮತ್ತು ಎಸ್.ಪಿ.ವಿ.ಗಳಿಗೆ ಮಾರ್ಜಿನ್ ಮನಿ ಮತ್ತು ಈಕ್ವಿಟಿ ಪಾರ್ಟಿಸಿಪೇಷನ್ ರೂಪದಲ್ಲಿ ಸಹಾಯಧನವನ್ನು ನೀಡಿದೆ. ಇವುಗಳನ್ನು ವಸೂಲು ಮಾಡಲು ಅಥವಾ ಇದರಿಂದ ಸರ್ಕಾರ ಡಿವಿಡೆಂಡ್ ಪಡೆದಿದೆಯೇ ಎಂಬ ಬಗ್ಗೆ ಹಾಗೂ ಗ್ಯಾರಂಟಿ ಕಮಿಷನ್ ಬಗ್ಗೆ ಯಾವುದೇ ಅನುಸರಣಾ ಕ್ರಮವನ್ನು ಕೈಗೊಂಡಿರುವುದಿಲ್ಲ. ಇದರ ಜೊತೆಗೆ ಸರ್ಕಾರದ ಸ್ವಾಮ್ಯಕೊಳ್ಳಪಟ್ಟ ಹಲವು ಸಂಸ್ಥೆಗಳಿಗೆ ಹಾಗೂ ಕಾರ್ಪೋರೇಷನ್‌ಗಳಿಗೆ ಬೃಹತ್ ಮೊತ್ತದ ಸಾಲಗಳನ್ನು ನೀಡಲಾಗಿದೆ. ಈ ಸಾಲಗಳನ್ನು ವಸೂಲಿ ಮಾಡುವ

ಕಾರ್ಯವನ್ನು ಸಮಯಕ್ಕೆ ಸರಿಯಾಗಿ ಗಮನಿಸಲಾಗುತ್ತಿಲ್ಲ. ಆದ್ದರಿಂದ ಬಂಡವಾಳ ಹೂಡಿಕೆ ಮಾಹಿತಿ ಪಡೆಯುವ ಹಾಗೂ ವಸೂಲಾತಿ ಕಾರ್ಯವನ್ನು ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಗೆ ವಹಿಸಲು ಉದ್ದೇಶಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 172 ಸಉಲಾ 2005, ಬೆಂಗಳೂರು, ದಿನಾಂಕ:22ನೇ ಮೇ 2006.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯನ್ನು ಪುನರ್ ರಚಿಸಿ ಆ ಇಲಾಖೆಯನ್ನು **"ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ"** ಎಂದು ಪುನರ್ ನಾಮಗೊಳಿಸಿ ಈ ಕೆಳಕಂಡ ಕೆಲಸಗಳನ್ನು ವಹಿಸಿದೆ.

1) ರೋಗಗ್ರಸ್ಥ ಸಕ್ಕರೆ ಕಾರ್ಖಾನೆಗಳಿಗೆ ನೀಡಿರುವ ಸಾಲ ವಸೂಲಾತಿ
2) ಕೈಗಾರಿಕಾ ಉದ್ದಿಮೆಗಳಿಗೆ ನೀಡಿರುವ ಮೃದು ಸಾಲ ಮತ್ತು ರಿಯಾಯಿತಿಗಳ ಬಗ್ಗೆ ನಿಗಾವಹಿಸುವುದು.
3) ಸರ್ಕಾರ ಸ್ವಾಮ್ಯಕ್ಕೊಳಪಟ್ಟಿರುವ ಹಣಕಾಸು ಸಂಸ್ಥೆಗಳಿಗೆ ಮತ್ತು ಸರ್ಕಾರಿ ವಲಯಗಳಿಗೆ ನೀಡಿರುವ ಸಾಲ ವಸೂಲಾತಿ.
4) ರಾಜ್ಯ ಸರ್ಕಾರ ಸ್ವಾಮ್ಯಕ್ಕೊಳಪಟ್ಟ ಸಂಸ್ಥೆಗಳಿಗೆ ನೀಡಿರುವ ಮಾರ್ಜಿನ್ ಹಣದ ವಸೂಲಾತಿ.
5) ಕಂಪನಿ ಮತ್ತು ಕಾರ್ಪೊರೇಷನ್‌ಗಳು ಸರ್ಕಾರದ ಭರವಸೆಯ ಮೇಲೆ ಪಡೆದಿರುವ ಸಾಲದ ಮೇಲೆ ಭರವಸೆಯ ಕಮಿಷನ್ ವಸೂಲಾತಿಯ ಬಗ್ಗೆ ನಿಗಾವಹಿಸುವುದು.
6) ಸರ್ಕಾರದಿಂದ ಬಿಡುಗಡೆಯಾದ ಹಣಕಾಸು ಸಂಸ್ಥೆಗಳ ಸಾಲ ವಸೂಲಾತಿ.
7) ಸಹಕಾರ ಸಂಸ್ಥೆಗಳಿಗೆ ನೀಡಿರುವ ಷೇರು ಬಂಡವಾಳದ ವಸೂಲಾತಿಯ ಬಗ್ಗೆ ನಿಗಾವಹಿಸುವುದು.
8) ಕಾರ್ಪೊರೇಷನ್ ಮತ್ತು ಕಂಪನಿಗಳ ಅಧೀನದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ವಹಿವಾಟುಗಳಿಗೆ ನೀಡಿರುವ ಮೂಲದ್ರವ್ಯದ ಹಣವನ್ನು ವಸೂಲಿ ಮಾಡುವುದು.
9) ಹುಡ್ಕೋ ಮತ್ತು ಇತರ ರಾಷ್ಟ್ರೀಯ ಹಣಕಾಸು ನಿಗಮಗಳಿಂದ ಸಾಲ ಪಡೆದಿರುವ ವಿವಿಧ ಪಿ.ಎಸ್.ಯು.ಗಳ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಂದ ವಸೂಲಾತಿ.
10) ಹಣಕಾಸಿನ ಆಸ್ತಿಗಳ / ಅದರಂತೆ ಕಾಣುವ ಸ್ವರೂಪಗಳಿಂದ ವಸೂಲಾತಿ.

ನಿರ್ದೇಶನಾಲಯವು, ಸರ್ಕಾರದ ಠೇವಣಿಗಳು ಹಾಗೂ ಗ್ಯಾರಂಟಿಗಳ ಸಮಗ್ರ ಅಂಕಿ–ಅಂಶ ಹಾಗೂ ದಾಖಲೆಗಳನ್ನು ನಿರ್ವಹಿಸುವುದು, ಬಡ್ಡಿ, ಡಿವಿಡೆಂಡ್ ಹಾಗೂ ಕಮಿಷನ್ ಇತ್ಯಾದಿ ರೂಪದಲ್ಲಿ ಬರುವ ಸರ್ಕಾರದ ಆದಾಯವನ್ನು ಕ್ರಮಬದ್ಧವಾಗಿ ಸಂಗ್ರಹಿಸುವುದು. ಮೇಲ್ಕಾಣಿಸಿದ ಆದಾಯವನ್ನು ಸತತ ಪ್ರಯತ್ನದ ನಂತರವೂ ಸಂಗ್ರಹಿಸಲಾಗದಿದ್ದಲ್ಲಿ ನಿಬಂಧನೆಗಳು ಹಾಗೂ ಷರತ್ತುಗಳನ್ವಯ ಸದರಿ ಠೇವಣಿಗಳ ಹಾಗೂ ಗ್ಯಾರಂಟಿಗಳ ಕುರಿತು ಪರಿಶೀಲಿಸಿ ಪ್ರತಿಯೊಂದು ಪ್ರಕರಣಗಳಲ್ಲಿಯೂ ಯಾವ ಬಗೆಯಲ್ಲಿ ಅದನ್ನು ವಸೂಲಿ ಮಾಡಬಹುದೆಂಬ ಬಗ್ಗೆ ಸಲಹೆ ನೀಡತಕ್ಕದ್ದು. ಸಾಲ ಪಡೆದು ಮರುಪಾವತಿಸಲು ಸಂಪೂರ್ಣವಾಗಿ ಸೋತಿರುವ ಹಾಗೂ ಉದ್ದೇಶಪೂರ್ವಕವಾಗಿ ಸುಸ್ತಿದಾರರಾಗಿರುವ ಪ್ರಕರಣಗಳಲ್ಲಿ ವಸೂಲಾತಿಯ ವ್ಯಾಪ್ತಿಯನ್ನು ಖಾತ್ರಿಪಡಿಸಿಕೊಳ್ಳುವುದು, ಭೂಕಂದಾಯದ ಬಾಕಿ ವಸೂಲಿಯಂತೆ ವಸೂಲಿ ಮಾಡುವ ಬಗ್ಗೆ ವಸೂಲಾತಿ ದೃಢೀಕರಣ ಪತ್ರವನ್ನು ಜಿಲ್ಲಾಧಿಕಾರಿಗಳಿಗೆ ವಿತರಿಸುವುದು/ನೀಡುವುದು.

ಮೇಲ್ಕಂಡ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯನ್ನು ಪುನರ್ ರಚಿಸಿದ ನಂತರ ಇಲಾಖೆಯ ಪುನರ್ ರಚನೆಯ ಸಂಘಟನೆಯ ಪಟ್ಟಿಯನ್ನು ಅನುಬಂಧ–"ಎ" ರಲ್ಲಿರುವಂತೆ ಇರತಕ್ಕದ್ದು. ಇಲಾಖೆಗೆ ಹೊಸದಾಗಿ ವಹಿಸಲಾಗಿರುವ ಕೆಲಸ ಕಾರ್ಯಗಳ ಬಗ್ಗೆ ಯಾವ ಯಾವ ಅಧಿಕಾರಿಗಳು ಯಾವ ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕು ಎಂಬ ಬಗ್ಗೆ ಅನುಬಂಧ –"ಬಿ" ರಲ್ಲಿ ನಮೂದಿಸಲಾಗಿದೆ.

ಮೇಲ್ಕಾಣಿಸಿದಂತೆ ವಸೂಲಾತಿಗೆ ಅಗತ್ಯವಿರುವ ಮಾಹಿತಿಯನ್ನು ಸಂಬಂಧಪಟ್ಟ ಇಲಾಖೆಗಳು ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಗೆ ವಿಳಂಬವಿಲ್ಲದಂತೆ ನೀಡತಕ್ಕದ್ದು. ವಸೂಲಾತಿ ಕಾರ್ಯದಲ್ಲಿ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಗೆ ಅಗತ್ಯವಿರುವ ಸಿಬ್ಬಂದಿ ಸಹಾಯ ಸೇರಿದಂತೆ, ಎಲ್ಲಾ ರೀತಿಯ ನೆರವನ್ನೂ ಆಯಾ ಇಲಾಖೆಗಳು ಆದ್ಯತೆಯ ಮೇರೆಗೆ ಒದಗಿಸತಕ್ಕದ್ದು.

ಮೇಲ್ಕಾಣಿಸಿದಂತೆ ವಸೂಲಾತಿ ಕಾರ್ಯವನ್ನು ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ ನಿರ್ವಹಿಸಲು ಸಹಕಾರಿಯಾಗುವಂತೆ, ಸಂಬಂಧಪಟ್ಟ ಇಲಾಖೆಗಳು ಈಗಾಗಲೇ ಜಾರಿಯಲ್ಲಿರುವ ಆಯಾ ಇಲಾಖೆಗಳಲ್ಲಿನ ನಿಯಮ ಮತ್ತು ಕಾಯ್ದೆಗಳನ್ನು ಸೂಕ್ತ ರೀತಿಯಲ್ಲಿ ತಿದ್ದುಪಡಿ ಮಾಡುವ ಬಗ್ಗೆ (ಅಗತ್ಯವಿದ್ದಲ್ಲಿ) ಕೂಡಲೇ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ನಿರ್ದೇಶಕರು, ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಗೆ ಈಗ ಹೊಸದಾಗಿ ವಹಿಸಿರುವ ಕಾರ್ಯಗಳನ್ನು ಕೈಗೊಳ್ಳಲು ತಕ್ಷಣವೇ ಸಂಬಂಧಪಟ್ಟ ಇಲಾಖೆಗಳಿಂದ ಅಗತ್ಯ ಮಾಹಿತಿಯನ್ನು ಪಡೆದು ಹೊಸದಾಗಿ ವಹಿಸಿರುವ ಕೆಲಸಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿರ್ವಹಿಸತಕ್ಕದ್ದು. ಈ ಆದೇಶವನ್ನು ದಿನಾಂಕ: 05.04.2006 ರಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ ವಿಷಯ ಸಂಖ್ಯೆ:ಸಿ–54/2006ರಲ್ಲಿ ಅನುಮೋದನೆ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಲ್.ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**Annexure-A**

**ORGANIZATIONAL CHART**

**FOR THE PROPOSED DIRECTORATE OF INVESTMENT TRACKING AND REALIZATION, SMALL SAVINGS AND STATE LOTTERY**




ಎಲ್.ಶ್ರೀನಿವಾಸನ್
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇ ಲಾಖೆ (ಆಡಳಿತ & ಮುಂಗಡ)

**Annexure-B**

**PROPOSED PORTFOLIO ALLOCATED TO EACH OF THE OFFICERS AND REVISED DISTRIBUTION OF WORK AFTER ASSIGNING THE TASK OF INVESTMENT TRACKING AND REALISATION**

1. Director – Overall Supervision of the Department

1A. Deputy Director (Administration)

ADMINISTRATION (Present duties to be continued)

A. AMOUNT RECOVERABLE UNDER THE PACKAGE OF INCENTIVES AND CONCESSIONS.

i) Development loan.

ii) Purchase tax deferment to sugar mills.

iii) Other specific cases as & when directed by the Government.

1. Deputy Director (Publicity)

PUBLICITY (Present duties to be continued)

B } RECOVERY OF LOAN FROM CO-OPERATIVES AND
C } PSUs FOLLOW UP OF LOAN FOR PSUs AND CO-OPERATIVES.

2. Deputy Director (Lottery)

LOTTERY (Present duties to be continued)

D. GUARANTEE COMMISSION

E. RECOVERY OF NCDC LOANS

i) NCDC assistance

ii) Share capital loan

iii) Share capital investment

4. Asst. Director (Publicity)

PUBLICITY (Present duties to be continued)

F. FINANCIAL ASSISTANCE TO CREATE CORPUS FUND.

5. Asst. Director (Accounts)

LOTTERY (Present duties to be continued)

G. RECOVERIES OF FINANCE FROM EAP.

6. Asst. Director (Administration)

ADMINISTRATION (Present duties to be continued)

H. HUDCO AND OTHER NATIONAL LEVEL FINANCIAL CORPORATION.

7. Assistant Director of District

Any other work that may be assigned by the Director relating to investment tracking and realization in addition to the existing work.

ಎಲ್.ಶ್ರೀನಿವಾಸನ್
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇ ಲಾಖೆ (ಆಡಳಿತ & ಮುಂಗಡ)

ಪಿ.ಆರ್. 881

**ಶಿಕ್ಷಣ ಸಚಿವಾಲಯ**

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಗುಲ್ಬರ್ಗಾದ ಶ್ರೀ ಹಿಂಗುಲಾಂಬಿಕ ಎಜುಕೇಷನ್ ಸೊಸೈಟಿಯ ಗುಲ್ಬರ್ಗಾದಲ್ಲಿನ ಎಸ್.ಹೆಚ್.ಇ .ಎಸ್ ಸ್ ಬಿ.ಎಡ್. ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:26-12-2003ರ ಸಂಖ್ಯೆ: ಇ ಡಿ 214 ಯುಜಿವಿ 2003ರ ಸರ್ಕಾರಿ ಆದೇಶ.

(2) ದಿನಾಂಕ:14-02-2006, ಸಂಖ್ಯೆ: F.SRO/NCTE/B.Ed/ 2005-06/5435ರ NCTEಯ ಪಾದೇಶಿಕ ನಿರ್ದೇಶಕರ ಪತ.

(3) ದಿ:28-03-2006ರ ಶ್ರೀ ಹಿಂಗುಲಾಂಬಿಕ ಎಜುಕೇಷನ್ ಸೊಸೈಟಿ, ಗುಲ್ಬರ್ಗಾ, ಈ ಸಂಸ್ಥೆಯ ಅಧ್ಯಕ್ಷರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾದ ಶ್ರೀ ಹಿಂಗುಲಾಂಬಿಕ ಎಜುಕೇಷನ್ ಸೊಸೈಟಿಯ ಗುಲ್ಬರ್ಗಾದಲ್ಲಿನ ಎಸ್.ಹೆಚ್.ಇ .ಎಸ್ ಸ್ ಬಿ.ಎಡ್. ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ ದಿನಾಂಕ: 14-02-2006ರ ಆದೇಶದಲ್ಲಿ ಎನ್‌ಸಿಟಿಇ ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:28-03-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಮೇಲ್ಕಂಡ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 34 ಯುಜಿವಿ 2006, ಬೆಂಗಳೂರು, ದಿನಾಂಕ: 20ನೇ ಮೇ 2006.**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪಕರಣದ 18ನೇ ಉಪ ಪಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಗುಲ್ಬರ್ಗಾದ ಶ್ರೀ ಹಿಂಗುಲಾಂಬಿಕ ಎಜುಕೇಷನ್ ಸೊಸೈಟಿಯ ಗುಲ್ಬರ್ಗಾದಲ್ಲಿನ ಎಸ್.ಹೆಚ್.ಇ .ಎಸ್ ಸ್ ಬಿ.ಎಡ್. ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 833

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಕೃಪಾನಿಧಿ ಎಜುಕೇಷನಲ್ ಟ್ರಸ್ಟ್‌ನ ಕೃಪಾನಿಧಿ ಕಾಲೇಜ್ ಆಫ್ ಎಜುಕೇಷನ್, ನಂ.72/1, ರಿಂಗ್ ರಸ್ತೆ, ಬೆಳ್ಳಂದೂರು, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:27-12-2003ರ ಸಂಖ್ಯೆ: ಇ ಡಿ 428 ಯುಆರ್‌ಸಿ 2003ರ ಸರ್ಕಾರಿ ಆದೇಶ.

(2) ದಿನಾಂಕ:06-01-2006, ಸಂಖ್ಯೆ: F.SRO/NCTE/B.Ed/ 2005-06/5145ರ NCTEಯ ಪಾದೇಶಿಕ ನಿರ್ದೇಶಕರ ಪತ.

(3) ದಿ:21-02-2006ರ ಅಧ್ಯಕ್ಷರು, ಕೃಪಾನಿಧಿ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು ಇ ವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಕೃಪಾನಿಧಿ ಎಜುಕೇಷನಲ್ ಟ್ರಸ್ಟ್‌ನ ಕೃಪಾನಿಧಿ ಕಾಲೇಜ್ ಆಫ್ ಎಜುಕೇಷನ್, ನಂ.72/1, ರಿಂಗ್ ರಸ್ತೆ, ಬೆಳ್ಳಂದೂರು, ಬೆಂಗಳೂರು, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು

ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ ದಿನಾಂಕ: 06-01-2006ರ ಆದೇಶದಲ್ಲಿ ಎನ್‌ಸಿಟಿಇ ಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:21-02-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 32 ಯುಬಿವಿ 2006, ಬೆಂಗಳೂರು, ದಿನಾಂಕ: 22ನೇ ಮೇ 2006.**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಕೃಪಾನಿಧಿ ಎಜುಕೇಷನಲ್ ಟ್ರಸ್ಟ್‌ನ ಕೃಪಾನಿಧಿ ಕಾಲೇಜ್ ಆಫ್ ಎಜುಕೇಷನ್, ನಂ.72/1, ರಿಂಗ್ ರಸ್ತೆ, ಬೆಳ್ಳಂದೂರು, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯ ವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 854

**ವಿಷಯ:** 2006-07ನೇ ಶೈಕ್ಷಣಿಕ ಸಾಲಿಗೆ ಶಿವಮೊಗ್ಗದ ಆಲ್-ಮಹಮದ್ ಎಜುಕೇಷನ್ ಸೊಸೈಟಿಯು ಆಲ್-ಮಹಮ್ಮದ್ ಬಿ.ಎಡ್ ಕಾಲೇಜು, ಶಿವಮೊಗ್ಗ, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:20-02-2004ರ ಸಂಖ್ಯೆ: ಇ ಡಿ 272 ಯುಆರ್‌ಸಿ 2004ರ ಸರ್ಕಾರಿ ಆದೇಶ.

(2) ದಿನಾಂಕ:16-02-2006, ಸಂಖ್ಯೆ: F.SRO/NCTE/B.Ed/ 2005-06/5463ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

(3) ದಿ:22-02-2006ರ ಕಾರ್ಯದರ್ಶಿ, ಆಲ್-ಮಹಮದ್ ಎಜುಕೇಷನ್ ಸೊಸೈಟಿ, ಶಿವಮೊಗ್ಗ ಇ ವರ ಪತ್ರ.

**ಪೀಠಿಕೆ:**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಶಿವಮೊಗ್ಗದ ಆಲ್-ಮಹಮದ್ ಎಜುಕೇಷನ್ ಸೊಸೈಟಿಯು ಆಲ್-ಮಹಮ್ಮದ್ ಬಿ.ಎಡ್ ಕಾಲೇಜು, ಶಿವಮೊಗ್ಗ, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ ದಿನಾಂಕ: 16-02-2006ರ ಆದೇಶದಲ್ಲಿ ಎನ್‌ಸಿಟಿಇ ಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2006-07ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:22-02-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 44 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 26ನೇ ಮೇ 2006.**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿವಮೊಗ್ಗದ ಆಲ್-ಮಹಮದ್ ಎಜುಕೇಷನ್ ಸೊಸೈಟಿಯು ಆಲ್-ಮಹಮ್ಮದ್ ಬಿ.ಎಡ್ ಕಾಲೇಜು, ಶಿವಮೊಗ್ಗ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2006-07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 855

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಶಾಂತಿನಿಕೇತನ್ ಎಜುಕೇಷನಲ್ ಅಂಡ್ ವೆಲ್‌ಫೇರ್ ಟ್ರಸ್ಟ್‌ನ ಶಾಂತಿನಿಕೇತನ್ ಬಿ.ಎಡ್ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:21-02-2004ರ ಸಂಖ್ಯೆ: ಇ ಡಿ 312 ಯುಆರ್‌ಸಿ 2003ರ ಸರ್ಕಾರದ ಪತ್ರ.
(2) ದಿನಾಂಕ:04-04-2006, ಸಂಖ್ಯೆ: F.SRO/NCTE/B.Ed/ 2005-06/5772ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
(3) ದಿ:17-04-2006ರ ಮ್ಯಾನೇಜಿಂಗ್ ಟ್ರಸ್ಟಿ, ಶಾಂತಿನಿಕೇತನ್ ಎಜುಕೇಷನಲ್ ಅಂಡ್ ವೆಲ್‌ಫೇರ್ ಟ್ರಸ್ಟ್, ಬೆಂಗಳೂರು, ಇ ವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಪತ್ರದಲ್ಲಿ ಬೆಂಗಳೂರಿನ ಶಾಂತಿನಿಕೇತನ್ ಎಜುಕೇಷನಲ್ ಅಂಡ್ ವೆಲ್‌ಫೇರ್ ಟ್ರಸ್ಟ್‌ನ ಶಾಂತಿನಿಕೇತನ್ ಬಿ.ಎಡ್ ಕಾಲೇಜನ್ನು ಸ್ಥಾಪಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ ದಿನಾಂಕ:04-04-2006ರ ಆದೇಶದಲ್ಲಿ ಎನ್.ಸಿ.ಟಿ.ಇ .ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುತ್ತದೆ. ಉಲ್ಲೇಖ(3)ರಲ್ಲಿರುವ ದಿನಾಂಕ:17-04-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಮ್ಯಾನೇಜಿಂಗ್ ಟ್ರಸ್ಟಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 97 ಯುಬಿವಿ 2006, ಬೆಂಗಳೂರು, ದಿನಾಂಕ: 25ನೇ ಮೇ 2006.**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಶಾಂತಿನಿಕೇತನ್ ಎಜುಕೇಷನಲ್ ಅಂಡ್ ವೆಲ್‌ಫೇರ್ ಟ್ರಸ್ಟ್‌ನ ಶಾಂತಿನಿಕೇತನ್ ಬಿ.ಎಡ್ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 856

ವಿಷಯ: 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಎ.ಡಿ.ಐ.ಪಿ. ಎಜುಕೇಷನಲ್ ಟ್ರಸ್ಟ್‌ನ ಎ.ಇ .ಟಿ. ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

ಉಲ್ಲೇಖ: (1) ದಿನಾಂಕ:21-02-2004ರ ಸಂಖ್ಯೆ: ಇ ಡಿ 197 ಯುಆರ್‌ಸಿ 2004ರ ಸರ್ಕಾರದ ಪತ್ರ.
(2) ದಿನಾಂಕ:31-01-2006, ಸಂಖ್ಯೆ: F.SRO/NCTE/B.Ed/ 2005-06/5298ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
(3) ದಿ:10-04-2006ರ ಕಾರ್ಯದರ್ಶಿ, ಎ.ಡಿ.ಐ.ಪಿ. ಎಜುಕೇಷನಲ್ ಟ್ರಸ್ಟ್, ಬೆಂಗಳೂರು, ಇ ವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಪತ್ರದಲ್ಲಿ ಬೆಂಗಳೂರಿನ ಎ.ಡಿ.ಐ.ಪಿ. ಎಜುಕೇಷನಲ್ ಟ್ರಸ್ಟ್‌ನ, ಎ.ಇ .ಟಿ. ಕಾಲೇಜ್ ಆಫ್ ಎಜುಕೇಷನ್‌ಅನ್ನು ಸ್ಥಾಪಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ ದಿನಾಂಕ:31-01-2006ರ ಆದೇಶದಲ್ಲಿ ಎನ್.ಸಿ.ಟಿ.ಇ .ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ

100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುತ್ತದೆ. ಉಲ್ಲೇಖ(3)ರಲ್ಲಿರುವ ದಿನಾಂಕ: 10-04-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 105 ಯುಬಿವಿ 2006, ಬೆಂಗಳೂರು, ದಿನಾಂಕ: 25ನೇ ಮೇ 2006.**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಎ.ಡಿ.ಐ.ಪಿ. ಎಜುಕೇಷನಲ್ ಟ್ರಸ್ಟ್‌ನ, ಎ.ಇ.ಟಿ. ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 857

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಹಿರಿಯೂರಿನ ಶ್ರೀ ಗಿರೀಶ ವೀರಶೈವ ವಿದ್ಯಾವರ್ಧಕ ಸಂಘದ ಗಿರೀಶ ಬಿ.ಎಡ್ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:27-12-2003ರ ಸಂ. ಇ ಡಿ 137 ಯುಆರ್‌ಸಿ 2003ರ ಸರ್ಕಾರಿ ಆದೇಶ.

(2) ದಿನಾಂಕ: 30-01-2006, ಸಂಖ್ಯೆ: F.SRO/NCTE/B.Ed/ 2005-06/5258ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

(3) ದಿನಾಂಕ:07-04-2006ಸಂ.ಗಿ.ವೀ.ವಿ.ಸಂ/26/2005-06 ಶ್ರೀ ಗಿರೀಶ ವೀರಶೈವ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯವರ ಪತ್ರ.

**ಪೀಠಿಕೆ:**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇ ಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ . ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇ ಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಹಿರಿಯೂರಿನ ಶ್ರೀ ಗಿರೀಶ ವೀರಶೈವ ವಿದ್ಯಾವರ್ಧಕ ಸಂಘದ ಗಿರೀಶ ಬಿ.ಎಡ್ ಕಾಲೇಜು, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 30-01-2006ರ ಆದೇಶದಲ್ಲಿ ಎನ್‌ಸಿಟಿಇ ಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:07-04-2006ರ ಪತ್ರದಲ್ಲಿ ಸದರಿ ಕಾಲೇಜಿನ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 34 ಯುಎಸ್‌ವಿ 2006, ಬೆಂಗಳೂರು, ದಿನಾಂಕ: 31ನೇ ಮೇ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹಿರಿಯೂರಿನ ಶ್ರೀ ಗಿರೀಶ ವೀರಶೈವ ವಿದ್ಯಾವರ್ಧಕ ಸಂಘದ ಗಿರೀಶ ಬಿ.ಎಡ್ ಕಾಲೇಜು, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 880

ವಿಷಯ: 2005-06ನೇ ಶೈಕ್ಷಣಿಕ ಸಾಲಿನಿಂದ ರಾಯಚೂರಿನ ವಿವೇಕಾನಂದ ರೂರಲ್ ಎಜುಕೇಷನ್ ಟ್ರಸ್ಟ್‌ನ ದೈಹಿಕ ಶಿಕ್ಷಣ (ಬಿ.ಪಿ.ಎಡ್) ಕಾಲೇಜಿಗೆ ಸಂಯೋಜನೆ.

ಓದಲಾಗಿದೆ: (1) ದಿನಾಂಕ:21-02-2004, ಸಂಖ್ಯೆ: ಇಡಿ 35 ಯುಜಿವಿ 2004ರ ಸರ್ಕಾರಿ ಆದೇಶ

**(2) ದಿನಾಂಕ: 17-02-2006, ಸಂಖ್ಯೆ:** F.SRO/NCTE/B.P.Ed/2005-06/5489 ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.

**(3) ದಿನಾಂಕ: 24-04-2006ರ ಸಂಖ್ಯೆ: ವಿಆರ್‌ಇಟಿ/ಬಿ.ಪಿ.ಎಡ್/159, ವಿವೇಕಾನಂದ** ರೂರಲ್ ಎಜುಕೇಷನ್ ಟ್ರಸ್ಟ್‌ನ ಕಾರ್ಯದರ್ಶಿಯವರ ಪತ್ರ

ಪೀಠಿಕೆ:-

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ, ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ:21-02-2004, ಸಂಖ್ಯೆ: ಇಡಿ 35 ಯುಜಿವಿ 2004ರ ಸರ್ಕಾರಿ ಆದೇಶದಲ್ಲಿ ರಾಯಚೂರಿನ ವಿವೇಕಾನಂದ ರೂರಲ್ ಎಜುಕೇಷನ್ ಟ್ರಸ್ಟ್ ರಾಯಚೂರಿನಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ದೈಹಿಕ ಶಿಕ್ಷಣ ಕಾಲೇಜಿನಲ್ಲಿ ಬಿ.ಪಿ.ಎಡ್ ಕೋರ್ಸನ್ನು 40 (ನಲವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ 2004-05ನೇ ಶೈಕ್ಷಣಿಕ ಸಾಲಿನಿಂದ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ: 17-02-2006, ಸಂಖ್ಯೆ: F.SRO/NCTE/B.P.Ed/2005-06/5489ರ ಎನ್.ಸಿ.ಟಿ.ಇಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಸದರಿ ಕಾಲೇಜಿನ ಬಿ.ಪಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ದಿನಾಂಕ: 24-04-2006ರ ಸಂಖ್ಯೆ: ವಿಆರ್‌ಇಟಿ/ಬಿ.ಪಿ.ಎಡ್/159, ವಿವೇಕಾನಂದ ರೂರಲ್ ಎಜುಕೇಷನ್ ಟ್ರಸ್ಟ್‌ನ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದಕ್ಕಾಗಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 55 ಯುಜಿವಿ 2006, ಬೆಂಗಳೂರು, ದಿನಾಂಕ: 09ನೇ ಜೂನ್ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಯಚೂರಿನ ವಿವೇಕಾನಂದ ರೂರಲ್ ಎಜುಕೇಷನ್ ಟ್ರಸ್ಟ್‌ನ ದೈಹಿಕ ಶಿಕ್ಷಣ (ಬಿ.ಪಿ.ಎಡ್) ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 940

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

ವಿಷಯ: 2005-06ನೇ ಶೈಕ್ಷಣಿಕ ಸಾಲಿನಿಂದ ಬೀದರ್ ಜಿಲ್ಲೆಯ ಚಿದ್ರಿಯ ಇಂಡಿಯನ್ ಎಜುಕೇಷನ್ ಸೊಸೈಟಿಯ ಇಂಡಿಯನ್ ಮಹಿಳಾ ಶಿಕ್ಷಣ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

ಓದಲಾಗಿದೆ: (1) ದಿನಾಂಕ:31-12-2004, ಸಂಖ್ಯೆ: ಇಡಿ 113 ಯುಎನ್‌ಇ 2004ರ ಸರ್ಕಾರಿ ಆದೇಶ

(2) ದಿನಾಂಕ: 21-12-2005, ಸಂಖ್ಯೆ: F.SRO/NCTE/B.Ed/2005-06/4847ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.

(3) ದಿನಾಂಕ:02.05.2006, ಸಂಖ್ಯೆ: IES/ICEW/B.Ed/76/BDR/2005-06 ರ ಚಿದ್ರಿಯ ಇಂಡಿಯನ್ ಮಹಿಳಾ ಶಿಕ್ಷಣ ಕಾಲೇಜಿನ ಪ್ರಾಂಶುಪಾಲರ ಪತ್ರ.

ಪೀಠಿಕೆ:-

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ, ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ

ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 31–12–2004, ಸಂಖ್ಯೆ: ಇಡಿ 113 ಯುಎನ್‌ಇ 2004ರ ಸರ್ಕಾರಿ ಆದೇಶದಲ್ಲಿ ಬೀದರ್ ಜಿಲ್ಲೆ, ಚಿಟ್ರಿಯ, ಇಂಡಿಯನ್ ಎಜುಕೇಷನ್ ಸೊಸೈಟಿಯ ಮಹಿಳಾ ಶಿಕ್ಷಣ (ಸಂಜೆ) ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ: 21–12–2005, ಸಂಖ್ಯೆ: F.SRO/NCTE/B.Ed/2005-06/4847ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಚಿಟ್ರಿಯ ಇಂಡಿಯನ್ ಮಹಿಳಾ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 56 ಯುಎನ್‌ಇ 2006, ಬೆಂಗಳೂರು, ದಿನಾಂಕ: 24ನೇ ಮೇ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ್ ಜಿಲ್ಲೆ, ಚಿಟ್ರಿಯ ಇಂಡಿಯನ್ ಎಜುಕೇಷನ್ ಸೊಸೈಟಿಯ ಇಂಡಿಯನ್ ಮಹಿಳಾ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 835

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005–06ನೇ ಶೈಕ್ಷಣಿಕ ಸಾಲಿನಿಂದ ಗುಲ್ಬರ್ಗಾದ ಡೆಕ್ಕನ್ ಶಿಕ್ಷಣ ಸಂಸ್ಥೆಯ ಡೆಕ್ಕನ್ ಮಹಿಳಾ ಶಿಕ್ಷಣ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:** (1) ದಿನಾಂಕ: 31–12–2004, ಸಂಖ್ಯೆ: ಇಡಿ 110 ಯುಎನ್‌ಇ 2004ರ ಸರ್ಕಾರಿ ಆದೇಶ

(2) ದಿನಾಂಕ: 21–12–2005, ಸಂಖ್ಯೆ: F.SRO/NCTE/B.Ed/2005-06/4953ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.

(3) ದಿನಾಂಕ: 02.05.2006, ಸಂಖ್ಯೆ: DES/W.B.Ed/2005-06/14 ರ ಗುಲ್ಬರ್ಗಾದ ಡೆಕ್ಕನ್ ಶಿಕ್ಷಣ ಸಂಸ್ಥೆಯ ಡೆಕ್ಕನ್ ಶಿಕ್ಷಣ ಕಾಲೇಜಿನ ಪ್ರಾಂಶುಪಾಲರ ಪತ್ರ.

**ಪೀಠಿಕೆ**:–

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ, ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 31–12–2004, ಸಂಖ್ಯೆ: ಇಡಿ 110 ಯುಎನ್‌ಇ 2004ರ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾದ ಡೆಕ್ಕನ್ ಶಿಕ್ಷಣ ಸಂಸ್ಥೆಯ ಮಹಿಳಾ ಶಿಕ್ಷಣ (ಸಂಜೆ) ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ: 24–12–2005, ಸಂಖ್ಯೆ: F.SRO/NCTE/B.Ed/2005-06/4953ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಗುಲ್ಬರ್ಗಾದ ಡೆಕ್ಕನ್ ಮಹಿಳಾ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 55 ಯುಎನ್‌ಇ 2006, ಬೆಂಗಳೂರು, ದಿನಾಂಕ: 24ನೇ ಮೇ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ

ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಗುಲ್ಬರ್ಗಾದ ಡೆಕ್ಕನ್ ಶಿಕ್ಷಣ ಸಂಸ್ಥೆಯ ಡೆಕ್ಕನ್ ಮಹಿಳಾ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 834
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯಗಳು)

## COMMERCE AND INDUSTRIES SECRETARIAT

**Sub :** Joint survey and demarcation of mines in a phased manner - Joint survey of all mining leases in Hospet, Sandur and Bellary region - orders - regarding.

**Read :**
1. Government Order No. CI 194 : MMM 2005 dated 16.11.2005
2. Proceedings of the First meeting of State Level Task Force Committee held on 24.03.2006.
3. Proceedings of the meeting held in the presence of the Hon'ble Chief Minister on Mining and related issues and problems held on 07.04.2006.
4. Proposal of the Commissioner, Mines and Geology submitted on 25.05.2006.

**PREAMBLE :**

In the Government Order read at (1) above, State Level Task Force Committee and District Level Task Force Committees have been constituted for curbing illegal mining and to look in to the mining related issues. In the meeting of the State Level Task Force Committee read at (2) above, among various issues discussed, it was decided to have a Joint Inspection by team officers comprising from Department of Forests, Department of Mines and Geology, IBM, Karnataka State Pollution Control Board, Revenue, Land Survey and Settlement etc., in some of the important mining sectors of Major Minerals, etc.

In the meeting read at (3) above, as a measure of regulate mining activities, it was resolved to have Joint Survey and demarcation of mines in a phased manner. Joint Survey to be taken up of mines, whereever complaints regarding boundary disputes and encroachments reported by the District Level Task Force Committee. In the proposal read at (4) above, the Commissioner, Mines and Geology has proposed for survey of all mining leases in Hospet, Sandur and Bellary region by a team of officers from the following Organisations :-

1) Geological Survey of India / Survey of India ;
2) Department of Survey and Settlement (Revenue Department) ;
3) Forest Department ;
4) Department of Mines and Geology.

After examining the proposal in detail, Government have decided to order for Joint Survey of Mining lease in the first instance in Bellary District and later to be followed in the district of Chitradurga, Tumkur etc. Hence the order

**GOVERNMENT ORDER NO. CI 126 : MMM 2006, BANGALORE, DATED: 06th JUNE 2006**

In the circumstances explained in the preamble, the Government are pleased to order for a Joint Survey of all Mining leases in Hospet, Sandur and Bellary region, subject to prevailing Court orders if any, by a team comprising of :-

1. Geological survey of India / Survey of India ;
2. Deputy Conservator of Forests of the Division ;
3. Joint Director, Mines and Gology, Bellary Region ;
4. Deputy Director / Senior Geologist of the Department of Mines and Geology of the area ;

5. Assistant Director, Survey Settlement and Land Records ;

It is also directed that the Survey has to be taken up in Group of mines, i.e.,

i) NEB Range

ii) Kumaraswamy Range

iii) Donimalai Range

iv) Ramanadurga Range etc.,

Joint Survey of the Mines shall be carried by the team with a specific time schedule and be completed with in a period of 4 months.

For smooth completion of survey, the Director of Mines and Geology shall chalk out a Programme and shall direct the lease holder of the specific mine to stop mining operation for the specific period as per the time schedule of survey of the specific mine. The Director of Mines and Geology shall appoint a team co-ordinator for this purpose from among the members of the team shown above.

The Joint Survey team at the end of 4 months shall submit reports simultaneously to the District Level Task Force Committee and also to the Director, Mines and Geology.

By Order and in the name of the
Governor of Karnataka,

P.R. 908

**H.V. RAMACHANDRARAO**
Under Secretary to Government, (I/C) (Mines),
Commerce and Industries Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ನಗರಾಭಿವೃದ್ಧಿ ಇಲಾಖೆಯ ಸರ್ಕಾರದ ಪ್ರಧಾನಕಾರ್ಯದರ್ಶಿಯವರು ದಿನಾಂಕ:19.5.2006 ಮತ್ತು 20.5.2006ರಂದು ನವದೆಹಲಿಗೆ ಹೋಗಿ ಬರಲು ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ಪ್ರ.ಕಾ.ರವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ನಅಇ/ ಪ್ರಕಾ/42/06 ದಿನಾಂಕ:20.5.2006

**ಪ್ರಸ್ತಾವನೆ:**

ನವದೆಹಲಿಯ ವಿಜ್ಞಾನ ಭವನದಲ್ಲಿ ದಿನಾಂಕ:20.5.2006ರಂದು ನಡೆಯುವ ಮುಖ್ಯ ಕಾರ್ಯದರ್ಶಿಗಳ "Public Private Partnership in Infrastructure" ಸಮ್ಮೇಳನದಲ್ಲಿ ಭಾಗವಹಿಸುವ ಸಲುವಾಗಿ ಶ್ರೀಮತಿ ಲಕ್ಷ್ಮೀವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ದಿನಾಂಕ:19.5.2006ರಂದು ನವದೆಹಲಿಗೆ ಹೋಗಿ ದಿನಾಂಕ:20.5.2006ರಂದು ವಾಪಸ್ ಬರುವುದರಿಂದ ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ (1)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 12 ಸಮನ್ವಯ 2006, ಬೆಂಗಳೂರು, ದಿನಾಂಕ: 20ನೇ ಮೇ 2006**

ಶ್ರೀಮತಿ ಲಕ್ಷ್ಮೀವೆಂಕಟಾಚಲಂ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರು, ನವದೆಹಲಿಯ ವಿಜ್ಞಾನ ಭವನದಲ್ಲಿ ದಿನಾಂಕ:20.5.2006ರಂದು ನಡೆಯುವ ಮುಖ್ಯ ಕಾರ್ಯದರ್ಶಿಗಳ " Public Private Partnership in Infrastructure" ಸಮ್ಮೇಳನದಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ:19.5.2006 ರಂದು ನವದೆಹಲಿಗೆ ವಿಮಾನದಲ್ಲಿ ಪ್ರಯಾಣ ಮಾಡಿ ದಿನಾಂಕ: 20.5.2006ರಂದು ಬೆಂಗಳೂರಿಗೆ ಹಿಂದಿರುಗಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸದರಿ ಅಧಿಕಾರಿಗಳು ನಿಯಮಾನುಸಾರ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಮುಖ್ಯ ಕಾರ್ಯದರ್ಶಿಗಳ ಟಿಪ್ಪಣಿ ಸಂಖ್ಯೆ:ಸಿಎಸ್/1619/2006, ದಿನಾಂಕ:17.5.2006ರಲ್ಲಿ ನೀಡಿರುವ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.843

**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ (ಸಮನ್ವಯ)